# ಮಾನಸಿ

ತಿಂಗಳ ಪತ್ರಿಕೆ ಫೆಬ್ರುವರಿ ೧೯೯೧

ಮನೆಗೆಲಸದೊಂದಿಗೆ ಹಪ್ಪಳ ಮಾಡುವ ಮಹಿಳೆ
ಯರ ಬಗ್ಗೆ ನಡೆಸಿದ ಸಮೀಕ್ಷೆ

ನನ್ನ ಅವ್ವ

ಚಂದ್ರಲೇಖ

ಬದುಕು ಜಟಕಾ ಬಂಡಿ

ಸ್ತ್ರೀಯರ ಶೋಷಣೆಯ ಒಂದು ನೋಟ

# ಮಾನಸ

ಸಂಪುಟ : ೪ ಸಂಚಿಕೆ : ೨

ಫೆಬ್ರುವರಿ ೧೯೯೧

**ಸಂಪಾದಕೀಯ ಮಂಡಳಿ:**
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್., ಗಾಯತ್ರಿ ವಿ.

**ಸಲಹೆ—ಸಹಕಾರ**
ಇಳಾವಿಜಯ

ವಿಳಾಸ "ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

**ಬಿಡಿಪ್ರತಿ :2 ರೂ.**
**ಸೂಚನೆ :** ವಾರ್ಷಿಕ ಚಂದಾ :20ರೂ.
ಆಜೀವ ಚಂದಾ : 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ........



# ಸಂಪಾದಕೀಯ

೧೯೯೦ ರ ಡಿಸೆಂಬರ್ ೨೮, ೨೯, ೩೦, ೩೧ ಕ್ಯಾಲಿಕಟ್‌ನಲ್ಲಿ ಭಾರತೀಯ ಮಹಿಳಾ ಚಳುವಳಿಯ ೪ ನೇ ಸಮ್ಮೇಳನ ನಡೆಯಿತು. ಸಾವಿರಕ್ಕಿಂತ ಹೆಚ್ಚು ಹೆಂಗಸರು ಭಾಗವಹಿಸಿದ್ದ ಈ ಸಮ್ಮೇಳನ ಮಹಿಳಾ ಚಳುವಳಿಯು ಎತ್ತುವ ಹಲವಾರು ಪ್ರಶ್ನೆಗಳನ್ನು ಬೇರೆ ಬೇರೆ ವಿಷಯಗಳನ್ನು ಕುರಿತಾದ ಚಿಕ್ಕ ಚಿಕ್ಕ ಗುಂಪುಗಳಲ್ಲಿ ಎತ್ತಲಾಯಿತು. ಮಹಿಳೆ ಮತ್ತು ಹಿಂಸೆ, ಮಹಿಳೆ ಮತ್ತು ಮಾಧ್ಯಮ, ಮಹಿಳೆ ಮತ್ತು ರಾಜಕೀಯ ಮಹಿಳಾ ಅಧ್ಯಯನ ಇಂತಹ ಹಲವಾರು ವಿಷಯಗಳನ್ನು ಚಿಕ್ಕ ಚಿಕ್ಕ ಗುಂಪುಗಳಲ್ಲಿ ಚರ್ಚಿಸಲಾಯಿತು.

ಸಮ್ಮೇಳನದ ಮುಖ್ಯ ವಿಚಾರವಾಗಿ ಒಡ ಮೂಡಿ ಬಂದದ್ದು ಮಹಿಳೆ ಮತ್ತು ಕೋಮುವಾದ. ತಕ್ಷಣದ ಸಂದರ್ಭದಲ್ಲಿ ಕೋಮುವಾದದಿಂದ ಉಂಟಾಗುತ್ತಿರುವ ಹಿಂಸೆ ಕ್ರೌರ್ಯಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸಿದ ಮಹಿಳೆಯರು ಈ ವಿಚಾರವಾಗಿ ಮಹಿಳಾ ಚಳುವಳಿ ತನ್ನದೇ ಆದ ನಿರ್ದಿಷ್ಟ ನಿಲುವು ಹೊಂದುವ ಅಗತ್ಯವಿದೆಯೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಹಾಗಾಗಿ ಮಾರ್ಚ್ ೮ ೧೯೯೧ ನ್ನು ಕೋಮುವಾದಿ ವಿರೋಧಿ ದಿನವೆಂದು ಹಾಗೂ ೧೯೯೧ ಮಾರ್ಚ್ ಇಂದ ೧೯೯೨ ಮಾರ್ಚ್‌ನ್ನು ಕೋಮುವಾದಿ ವಿರೋಧಿ ವರ್ಷವೆಂದೂ ಆಚರಿಸಬೇಕೆಂದು ನಿಶ್ಚಯಿಸಲಾಯಿತು.

ಈ ಬಗ್ಗೆ ನಿರ್ಧಾರ ಕೈಗೊಂಡ ಎಲ್ಲಾ ಮಹಿಳಾ ಗುಂಪುಗಳೂ ಇಡೀ ರಾಷ್ಟ್ರದಾದ್ಯಂತ ಮಾರ್ಚ್ ೮ ರಂದು ಹಲವಾರು ಯೋಜನೆಗಳನ್ನು ಹಾಕಿಕೊಳ್ಳಲು ಯೋಚಿಸಲಾಗಿದೆ. ಈ ಬಗ್ಗೆ ಮಹಿಳಾ ಚಳುವಳಿಯು ನಿರ್ದಿಷ್ಟವಾದ ನಿಲುವನ್ನು ತೆಗೆದುಕೊಳ್ಳಬೇಕೆಂದರೆ ಮಹಿಳಾ ಹಕ್ಕಿನ ಬಗ್ಗೆ ಪ್ರಜ್ಞಾವಂತರಾಗಿರುವ ಪ್ರತಿಯೊಬ್ಬರ ಪ್ರತಿಕ್ರಿಯೆ ಹಾಗೂ ಸಹಕಾರ ಮುಖ್ಯ.

# ಮನೆಗೆಲಸದೊಂದಿಗೆ ಹಪ್ಪಳ ಮಾಡುವ ಮಹಿಳೆಯರ ಬಗ್ಗೆ ನಡೆಸಿದ ಸಮೀಕ್ಷೆ:



ಮನೆಯಲ್ಲಿದ್ದು ಮನೆಗೆಲಸದೊಂದಿಗೆ ನಾಲ್ಕು ಕಾಸು ಸಂಪಾದಿಸುವ ಹಲವಾರು ಮಾರ್ಗಗಳನ್ನು ಅಸಂಖ್ಯಾತ ಮಹಿಳೆಯರು ಕಂಡು ಕೊಂಡಿದ್ದಾರೆ. ಹಪ್ಪಳ ಉಪ್ಪಿನಕಾಯಿ, ಹೂ ಕಟ್ಟುವುದು, ಬಟ್ಟೆ ಹೊಲಿಯುವುದು ಬಿಡಿಭಾಗಗಳನ್ನು ಜೋಡಿಸಿಕೊಡುವುದು ಮುಂತಾದ ಕೆಲಸಗಳನ್ನು ಮಹಿಳೆಯರು ಮಾಡುತ್ತಿದ್ದರೂ ಇವರ ಕೆಲಸ, ಶ್ರಮ, ಅಗೋಚರ. ಅಸಂಘಟಿತರಾದ ಇವರು ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಇವರ ಅಸಾಹಯಕತೆಯನ್ನು ದುರುಪಯೋಗ ಪಡೆದು ಕೊಳ್ಳುತ್ತಾ ಹೆಚ್ಚು ಲಾಭ ಪಡೆಯುವ ವ್ಯವಸ್ಥೆ ಅವರನ್ನು ಸಂಘಟಿತರಾಗದಂತೆ ಮಾಡುತ್ತದೆ. ಕಾಡುಗೋಡಿ ಗ್ರಾಮದಲ್ಲಿ ಹಪ್ಪಳ ಮಾಡುವ ಮಹಿಳೆಯರ ಬಗ್ಗೆ ನಡೆಸಿದ ಸಮೀಕ್ಷೆ.

ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಇವೆಲ್ಲ ಹೆಂಗಸರ ಇಲಾಖೆಗೆ ಸೇರಿದವೆಂದು ಪರಿಗಣಿಸಲ್ಪಟ್ಟವುಗಳು. ಆದರೆ ಊಟಕ್ಕೆ ಕುಳಿತಾಗ ಇವುಗಳಲ್ಲಿ ಯಾವುದಕ್ಕಾದರೂ ಕುಂದುಂಟಾದರೆ ಗೃಹಿಣಿಗೆ ಮನೆಯವರ ಆರ್ಭಟ ತಡೆದುಕೊಳ್ಳುವುದು ಸ್ವಲ್ಪ ಕಷ್ಟವೆ. ಹಿಂದಿನ ದಿನಗಳಲ್ಲಿ, ಹೆಂಗಸರು ಅಕ್ಕಪಕ್ಕದ ಮನೆಯವರೊಂದಿಗೆ ಸೇರಿ ಹಪ್ಪಳ, ಸಂಡಿಗೆ, ಉಪ್ಪಿನಕಾಯಿಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಈಗಲೂ ಅಪರೂಪಕ್ಕೆ ಈ ವ್ಯವಸ್ಥೆ ಕಣ್ಣಿಗೆ ಬೀಳಬಹುದು ಹಳ್ಳಿಗಳಲ್ಲಿ. ಆದರೆ ಯಾಂತ್ರೀಕೃತ ಜೀವನದ ನಗರಗಳಲ್ಲಿ ಗೃಹಿಣಿಯ ಗಮನ ಅಂಗಡಿಗಳಲ್ಲಿ ತಯಾರಿಸಿ ಸಿದ್ಧವಾಗಿರುವ ಪ್ಯಾಕ್‌ಗೇ ಹೊರಳುತ್ತದ. ಇದಕ್ಕೆ ಕಾರಣ ಬಿಡುವಿಲ್ಲದ ಗಡಿಬಿಡಿಯ ಜೀವನ, ಸಮಯಾಭಾವ, ಸ್ಥಳಾಭಾವ. ಹಪ್ಪಳ, ಸಂಡಿಗೆಗಳನ್ನು ಒಣಗಿಸಲು ಸ್ಥಳಾವಕಾಶ ಬೇಕೇ ಬೇಕು. ಅಷ್ಟೇ ಮಟ್ಟಿಗೆ ಸಮಯವೂ ಬೇಕು. ಉದ್ಯೋಗಸ್ಥ ಮಹಿಳೆಗೆ ಮನೆಗೆಲಸ, ಆಫೀಸ್ ಕೆಲಸಗಳಿಗೇ ಸಮಯ ಸಾಕಾಗದಿರುವಂಥ ಪರಿಸ್ಥಿತಿ. ಇನ್ನು ಉದ್ಯೋಗವಿಲ್ಲದಿದ್ದರೂ ನಾನಾ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹಿಳೆಯರಿಗೂ ಸಮಯದ ಅಭಾವ, ನಾಗಾಗಿ ಪ್ಯಾಕ್‌ಗಳಲ್ಲಿ ಸಿದ್ಧವಾಗಿದ್ದು, ಬೇಕೆಂದಾಗ ಎಣ್ಣೆಯಲ್ಲಿ ಕರಿದು ಭೋಜನಪ್ರಿಯರ ಮನತಣಿಸಬಲ್ಲ "ರೆಡಿ ಮೇಡ್" ಹಪ್ಪಳಗಳು ಬಹು ಜನಪ್ರಿಯವಾಗುತ್ತಿವೆ. ಹಿಂದಿನಂತೆ ದಿನಗಟ್ಟಲೆ ಹಪ್ಪಳದ ಕಾರ್ಖಾನೆ ಮನೆಯಲ್ಲಿ ನಡೆಯದೆಯೇ ಬೇಕೆಂದಾಗ ಅವಶ್ಯಕತೆ ಪೂರೈಸುವ ಅಂಗಡಿಯ ಹಪ್ಪಳಗಳು ಸಾಕಷ್ಟು ಮಂದಿಯ ಜೀವನ ನಿರ್ವಹಣೆಗಳು ಸಹಕರಿಸಿವೆ.

ಬೀಡಿ ಕಟ್ಟುವುದು, ಊದುಬತ್ತಿ ಹೊಸೆಯುವುದು, ಪಾದರಕ್ಷೆಗಳ "ಬಾಲ್" ಅನ್ನು ಕತ್ತರಿಸುವುದು..................ಇತ್ಯಾದಿ ಇತ್ಯಾದಿ ಕೆಲಸಗಳನ್ನು ಗೃಹಿಣಿ ಮನೆಯಲ್ಲೇ ಕುಳಿತು, ತನ ಮನೆಯ ಕೆಲಸಗಳೊಂದಿಗೇ ನಡೆಸಿಕೊಂಡು ಸಂಪಾದನೆ ಮಾಡಬಹುದು. ಇದೇ ರೀತಿ ಹಪ್ಪಳಗಳನ್ನೂ ಮಾಡಿಕೊಡುವುದೂ ಈಗ ಸಾಮಾನ್ಯ ಸಂಗತಿಯಾಗಿದೆ. ಹೀಗೆನ್ನುವಾಗ ಹಪ್ಪಳ ಮುಂದಿಗೆ "ಲಿಜ್ಜತ್" ನೆನಪಾಗ

ಬಹುದು. ಲಿಜ್ಜತ್‌ನಂತೆ ಸಹಕಾರ ಸಂಘದ ರೀತಿಯಲ್ಲಿಲ್ಲದೆ, ಮಾಡಿಕೊಡುವವರಿಗೂ, ಮಾರುವವರಿಗೂ ಮಧ್ಯದಲ್ಲಿ ಬಹಳ ಅಂತರವಿರುವ ಇನ್ನಿತರ ಉದ್ಯಮಗಳಂತೇ ಹಪ್ಪಳ ಮಾಡುವವರ ಸಂಖ್ಯೆಯೂ ಕಡಿಮೆ ಇಲ್ಲ.

ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡು ಬರುವ ಈ ಉದ್ಯಮದಲ್ಲಿ, ಮಾಲಿಕರು ಕೊಟ್ಟ ಹಪ್ಪಳದ ಉಂಡೆಗಳನ್ನು ಲಟ್ಟಿಸಿ ಕೊಡುವುದಷ್ಟೇ ಇವರ ಕೆಲಸ. ಉಳಿದ ಯಾವ ವ್ಯವಹಾರಕ್ಕೂ ಇವರಿಗೂ ಸಂಬಂಧವಿಲ್ಲ. ಸಾಮಾನ್ಯವಾಗಿ ಮನೆಯಿಂದ ಹೊರಗೆ ಹೋಗಲು ಬಯಸದ ಗೃಹಿಣಿಯರು, ಅಥವಾ ಸಂಪ್ರದಾಯಗಳಿಂದಾಗಿ ಮನೆಯಲ್ಲಿಯೇ ಇರಬೇಕಾದಂಥ ಮಹಿಳೆಯರೇ ಇಲ್ಲಿನ ಕಾರ್ಮಿಕರು. ಅಥವಾ ಶ್ರಮಿಕರು ಎನ್ನಬಹುದು. ದಿನವೊಂದಕ್ಕೆ ಸಾವಿರಕ್ಕೂ ಮೇಲ್ಪಟ್ಟು ಹಪ್ಪಳ ತೀಡುವವರು ಇದ್ದಾರೆ. (ಕಾಡುಗೋಡಿಯಲ್ಲಿ ಸುಮಾರು ೨೦-೨೫ ರಷ್ಟು ಮಂದಿ ಇದ್ದಾರೆ) ನೂರು ಹಪ್ಪಳ ತೀಡಿಕೊಟ್ಟರೆ ೨ ರೂ. ಸಣ್ಣದಾದರೆ ೧.೨೫ ಅಥವಾ ೧.೫೦ ರೂ (ಎಣ್ಣೆಯ ಹಪ್ಪಳ) ನಮ್ಮ ಸಮೀಕ್ಷೆಯ ವರದಿ ಇಲ್ಲಿ ಕೊಡಲಾಗಿದೆ.

ಮನೆಯಲ್ಲೇ ಕುಳಿತು ಮಾಡುವುದಾದರೂ ಏನು? ಗೊಡ್ಡು ಹರಟೆಗಿಂತಲೂ ಹಪ್ಪಳ ಮಾಡಿಕೊಟ್ಟರೆ ದುಡ್ಡಾದರೂ ಬರುತ್ತದಲ್ಲ ಎನ್ನುತ್ತಾರೆ ಕುಸುಮ. ಬೇರೆಡೆ ಕೆಲಸಕ್ಕೆ ಹೋಗಲು ಸಾಕಷ್ಟು ವಿದ್ಯೆಯಿಲ್ಲ. ಹೊಲಿಗೆ ಗೊತ್ತಿದ್ದರೂ, ಮನೆಯಲ್ಲೇ ಹೊಲಿಗೆಯ ಯಂತ್ರವಿದ್ದರೂ, ಸದಾ ಬಟ್ಟೆಗಳು ಸಿಗುವುದಿಲ್ಲ. ಗಾರ್ಮೆಂಟ್ಸ್‌ಗೆ ಹೋಗುವ ಎಂದರೆ ಎರಡು ಮಕ್ಕಳ ತಾಯಿಯಾಗಿರುವ ಈಕೆ, ಬೆಳಿಗ್ಗೆ ೮ ರಿಂದ-ಸಂಜೆ ೬ ರವರೆಗೆ ಕೆಲಸಕ್ಕೆ ಹೋದರೆ ಕೆಲಸದಿಂದ ಬರುವ ಗಂಡನು, ಸ್ಕೂಲಿನಿಂದ ಬರುವ ಮಕ್ಕಳ ಊಟ, ತಿಂಡಿಗಳನ್ನು ತಯಾರಿಸುವವರಾರು? ಆದ್ದರಿಂದಲೇ ಮನೆಯ ಕೆಲಸವನ್ನು ಮಾಡಿಕೊಳ್ಳುತ್ತಾ ಸಂಪಾದನೆಗೂ ದಾರಿ ಯಾವುದು ಎಂದು ತಡಕಾಡುತ್ತಿದ್ದವರಿಗೆ ಕಾಲಿಗೆ ತೊಡರಿದ್ದು ಹಪ್ಪಳ ತೀಡುವ ಕೆಲಸ. ಮನೆಕಟ್ಟಿದ ಸಾಲವಿದೆ, ಮಕ್ಕಳ ವಿದ್ಯಾಭ್ಯಾಸ ಜೀವನ ನಿರ್ವಹಣೆ ಇವೆಲ್ಲವೂ ಗಂಡನ ತಲೆಯ ಮೇಲೇ ಇವೆ. ತಮ್ಮ ಕೈಲಿ ಹೆಚ್ಚಾಗದಿದ್ದರೂ ಮನೆಗೊಂದು ಅಳಿಲು ಸೇವೆ ಮಾಡಬಹುದು ಎಂದು ದಿನಕ್ಕೆ ೬-೧೦ರೂ. ಗಳವರೆಗೆ ಮಾಡಿದ ಸಂಪಾದನೆ ಮನೆ ಖರ್ಚಿಗೇ ಆಗುತ್ತದೆ. ಮೊದಲು ಆರೋಗ್ಯಕ್ಕೆ ಸರಿಹೊಂದದೆ ಮೈಕೈ ನೋವು ಬರುತ್ತಿತ್ತು. ಈಗ ಏನಿಲ್ಲ ಎನ್ನುತ್ತಾರೆ ಕುಸುಮ. ಇವರ ಪತಿ ಪ್ರಾರಂಭದಲ್ಲಿ ಈ ಕೆಲಸ ಬೇಡ ಎಂದು ಆಕ್ಷೇಪಿಸಿದ್ದುಂಟು. ಈಗ ಏನು ಹೇಳುವುದಿಲ್ಲ.

ಈ ಹಪ್ಪಳ ಮಾಡುವವರಲ್ಲಿ ಸೀನಿಯರ್ ಎನ್ನಬಹುದಾದ ನಸೀಮಾರವರು ಕಳೆದ ೫ ವರ್ಷಗಳಿಂದಲೂ ಈ ಕೆಲಸದಲ್ಲಿ ತೊಡಗಿದ್ದಾರೆ. ಪ್ರಾರಂಭದಲ್ಲಿ ಮಾಲೀಕರು ೨-೩ ಜನರಿಂದ ಹಪ್ಪಳ ಮಾಡಿಸುತ್ತಿದ್ದರು. ಈಗ ತುಂಬಾ ಜನ ಹಪ್ಪಳ ಮಾಡುವುದರಲ್ಲಿ ತೊಡಗಿದ್ದಾರೆ. ಆದರೂ ಅಂದು ಎಷ್ಟು ಹಣ ಕೊಡುತ್ತಿದ್ದರೋ ಇಂದೂ ಅಷ್ಟೇ ನೀಡುತ್ತಿದ್ದಾರೆ. ಸ್ವಲ್ಪವೂ ಹೆಚ್ಚಿಸಿಲ್ಲ ಎನ್ನುತ್ತಾರೆ. ಈ ದುಡಿಮೆಯಿಂದ ಬಂದ ಹಣವೂ ಗೃಹ ನಿರ್ವಹಣೆಗೇ ಹೋಗುತ್ತದೆ ಈ ಮೊದಲು ಹೊಲಿಗೆ, ಊದುಬತ್ತಿ....ಇತ್ಯಾದಿಗಳಲ್ಲಿ ಕೈಯಾಡಿಸಿ, ಆರೋಗ್ಯ ಹದಗೆಟ್ಟ ಕಾರಣದಿಂದಾಗಿ ಈ ಹಪ್ಪಳ ತೀಡಲು ಆರಂಭಿಸಿದ್ದರು. ಈಗ ಇವರಿಗೆ ಎಷ್ಟು ಅಭ್ಯಾಸವಾಗಿ ಬಿಟ್ಟಿದೆಯೆಂದರೆ ಒಂದು ದಿನ ಹಪ್ಪಳದ ಕೆಲಸ ಇಲ್ಲವೆಂದರೆ ಏನೋ ಕಳಕೊಂಡಂತೆ ಎಂಬಷ್ಟು.

ನಿಮಗೀಗ ನೀಡುತ್ತಿರುವ ಹಣ ಸಾಕೆ? ಎಂಬ ಪ್ರಶ್ನೆಗೆ ಆಕೆ, ನಾವು ಕೇಳಿದರೆ. ಬೇಕಾದ್ರೆ ಮಾಡಿ ಇಲ್ಲದಿದ್ದರೆ ಬಿಡಿ ಎಂದು ಹೇಳುತ್ತಾರೆ, ಎಂದು ತಿಳಿಸಿದರು. ದುಡ್ಡು ಕಮ್ಮಿಯೆಂದು ಬಿಟ್ಟರೆ ನಮಗೇ ನಷ್ಟ, ಏಕೆಂದರೆ ಮಾಡಲು ಬಹಳ ಜನರಿರುವುದರಿಂದ ಮಾಲೀಕರಿಗೆ ಯಾವ ನಷ್ಟವೂ ಇಲ್ಲ ಎನ್ನುತ್ತಾರೆ. ಇದೂ ಸತ್ಯ. ಏಕೆಂದರೆ ನೀಲಾ ಬಿಟ್ಟದ್ದು ಇದೇ ಕಾರಣಕ್ಕಾಗಿ, ದುಡ್ಡು ಹೆಚ್ಚಿಸುವುದಿಲ್ಲ ಅಕಸ್ಮಾತ್ ಹಪ್ಪಳ ತೀಡುವಾಗ ಒಡೆದರೆ, ಅವರು ಅದಕ್ಕೆ ದುಡ್ಡು ಹಿಡಿದುಕೊಳ್ಳುತ್ತಾರೆ. ಒಂದು ಹಪ್ಪಳಕ್ಕೆ ೨೫ ಪೈಸೆಯಂತೆ ದುಡ್ಡು ತೆಗೆದುಕೊಳ್ಳುತ್ತಾರೆ, ಹೀಗಿರುವಾಗ ನಾವು ಲಟ್ಟಿಸಿದ ಹಪ್ಪಳಕ್ಕೆ ಬರುವ ದುಡ್ಡು ಇದಕ್ಕೇ ಹೋದರೆ ನಾವು ಬೆವರು ಹರಿಸಿದ್ದಕ್ಕೇನು ಫಲ ಎಂದು ಪ್ರಶ್ನಿಸುತ್ತಾರೆ. ಪ್ರಾರಂಭದಲ್ಲಿ, ೧೨-೧೫ ಹಪ್ಪಳಗಳು ಹಾಳಾದರೂ ಮಾತನಾಡುವುದಿಲ್ಲ ನಿಜ, ದರೂ ಅದಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಹಾಳಾದರೆ

ದುಡ್ಡು ಹಿಡಿನೇ ಹಿಡಿಯುತ್ತಾರೆ ಎನ್ನುವ ಈಕೆ, ಒಮ್ಮೆ ಹೀಗೆ ದಿನವಿಡೀ ಸಂಪಾದಿಸಿದ ಹಣ ಮಾಲೀಕರಿಗೇ ಕೊಡಬೇಕಾಗಿ ಬಂದದ್ದರಿಂದ ಪ್ರತಿಭಟಿಸಿ ಈ ಕೆಲಸಕ್ಕೆ ಕೈ ಮುಗಿದರು.

ಪುಟ್ಟಮ್ಮ, ಅವರ ಮಗಳು, ನಂಜಮ್ಮ, ಸುಶೀಲ........ಯಾರನ್ನು ಕೇಳಿದರೂ ಒಂದೇ ಉತ್ತರ ದುಡ್ಡು ಕಡಿಮೆ ಎಂದೇ. ಇವರೆಲ್ಲರ ಮನೆಯ ಗಂಡಸರೂ ಆಕ್ಷೇಪಿಸುತ್ತಿದ್ದರೂ ಈ ಉದ್ಯೋಗದಿಂದ ವಿಮುಖರಾಗಿಲ್ಲ. ಸುಶೀಲ ಈ ಕೆಲಸದೊಂದಿಗೇ ಹೋಲಿಗೆಯನ್ನೂ ಇಟ್ಟುಕೊಂಡಿದ್ದಾರೆ. ಇವರಾರಿಗೂ ದುಡ್ಡು ಉಳಿಸಲಾಗುತ್ತಿಲ್ಲ. ರುಕ್ಮಿಣಿ ಮಾತ್ರ ಈ ದುಡ್ಡನ್ನೇ ಇನ್ನು ಮುಂದೆ ಚೀಟಿಗೆ ಕಟ್ಟಬೇಕು, ಇಲ್ಲವಾದರೆ ಎಲ್ಲ ಮನೆಯ ಖರ್ಚಿಗೇ ಹೋಗುತ್ತದೆ, ಉಳಿಸಲಾಗುವುದಿಲ್ಲ ಎನ್ನುತ್ತಾರೆ. ಕಾಂತಮ್ಮ ಎರಡು ತಿಂಗಳಿಂದೀಚೆ ಪ್ರಾರಂಭಿಸಿದವರು. ಆದರೆ ಇವರ ಮಾನೋಬಲಕ್ಕೆ ತಕ್ಕಂತೆ ಇವರ ಆರೋಗ್ಯ ಕೇಳಲಿಲ್ಲ. ಏನೂ ಮಾಡಿದರೂ ಆರೋಗ್ಯ ಸರಿಯಾಗದೆ ತಲೆನೋವು, ಕತ್ತುನೋವು ದಿನದಿನಕ್ಕೂ ಹೆಚ್ಚುತ್ತಲೇ ಇದ್ದುದರಿಂದ ಈ ಹಪ್ಪಳ ತೀಡುವ ಕೆಲಸಕ್ಕೆ ಈಗ ವಿದಾಯ ಹೇಳಿದ್ದಾರೆ.

ಭಾಗ್ಯವ್ಮನಿಗೆ ಸ್ವತಃ ಹಪ್ಪಳ, ಉಪ್ಪಿನಕಾಯಿ ಮಾಡಿ ಮಾರಿದ ಅನುಭವವಿದೆ. ಅಂಗಡಿಗಳಿಗೂ ಕ್ಯಾಂಟೀನುಗಳಿಗೆ ಪೂರೈಸಿ ಒಳ್ಳೆ ಹೆಸರೂ ಪಡದಿದ್ದರು ಆದರೆ ಈಗ ಓಡಾಡಲು ಯಾರೂ ಇಲ್ಲ. ಈಕೆಯೊಬ್ಬರಿಂದಲೇ ಎಲ್ಲವನ್ನೂ ಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಎಂಬ ಕಾರಣಕ್ಕಾಗಿ ಅದನ್ನು ಬಿಟ್ಟುಬಿಟ್ಟಿದ್ದಾರೆ. ಹಪ್ಪಳದ ಹಿಟ್ಟು ತಯಾರಿಸಿ, ಹಪ್ಪಳ ತೀಡಿ, ಪ್ಯಾಕ್ ಮಾಡಿ ಮಾರುವವರೆಗೆ ಎಲ್ಲವನ್ನೂ ಚೆನ್ನಾಗಿ ತಿಳಿದಿರುವ ಈಕೆ ಈಗ ಬೇರೆಯವರು ಕೊಟ್ಟಿರುವ ಹಪ್ಪಳದ ಉಂಡೆಗಳನ್ನು ತೀಡಿಕೊಟ್ಟು ಬರುವ ಅಲ್ಪಸ್ವಲ್ಪ ಹಣದಿಂದಲೇ ಜೀವನ ನಿರ್ವಹಿಸಬೇಕು. ಇವರನ್ನು ಬಿಟ್ಟರೆ ಮತ್ತಾರೂ ಮನೆಯಲ್ಲಿ ದುಡಿಯುವವರಿಲ್ಲ, ಬೆಳಿಗ್ಗೆ ಒಂಭತ್ತು ಘಂಟೆಗೆ ಪ್ರಾರಂಭಿಸಿದರೆ ಸಂಜೆ ಐದರ ಒಳಗೆ ಮುಗಿಸಲೇ ಬೇಕು. ಮನೆಯಲ್ಲಿ ವಿದ್ಯುಚ್ಛಕ್ತಿ ಇಲ್ಲದಿರುವುದರಿಂದ ರಾತ್ರಿ ಮಾಡಲು ಸಾಧ್ಯವಿಲ್ಲ. ದಿನವೊಂದಕ್ಕೆ ೧೦೦೦ ಹಪ್ಪಳ ಮಾಡುವ ಇವರು ಈ ಉದ್ಯಮದಲ್ಲಿ ೧೦೦೦ ಹಪ್ಪಳಕ್ಕೆ ೨೦೦ ರೂ ಲಾಭವಂತೂ ಇದ್ದೇ ಇದೆ ಎನ್ನುತ್ತಾರೆ. ಆದ್ದರಿಂದ ೧೦೦ ಹಪ್ಪಳಕ್ಕೆ ೩ ರೂ ಕೊಟ್ಟರೆ ಮಾಲೀಕರಿಗೆ ಏನೂ ನಷ್ಟವಿಲ್ಲ ಎಂದು ಖಡಾ ಖಂಡಿತವಾಗಿ ನುಡಿಯುತ್ತಾರೆ.

ಭಾಗ್ಯಮ್ಮನ ಮನೆಯಲ್ಲಿ ನಾಲ್ಕು ಜನರಿದ್ದಾರೆ, ಆದರೆ ಈಕೆಯ ಗಳಿಕೆಯಿಂದಲೇ ಸಂಸಾರ ರಥ ಸಾಗಬೇಕಾಗಿರುವುದರಿಂದ ಈಕೆ ವಿಧಿಯಿಲ್ಲದೇ ಈ ಕಾಯಕವನ್ನು ಹಿಡಿದುಕೊಂಡಿದ್ದಾರೆ.

೫೧ರ ರವಿೂಜಾಬಿಯವರಿಗೆ ಆರೋಗ್ಯದ ತೊಂದರೆ ಏನಿಲ್ಲ, ಮೊದಲು ೫ ತಿಂಗಳುಗಳವರೆಗೆ ಮಾಡುತ್ತಿದ್ದವರು ಮನೆಯಲ್ಲಿ ಗಂಡು ಮಕ್ಕಳು ಬೈದುದರಿಂದ ನಿಲ್ಲಿಸಿದ್ದರು. ಈಗ ಮತ್ತೆ ಪ್ರಾರಂಭಿಸಿದ್ದಾರೆ. ಇವರ ಮಗಳು ಜಮೀಲಾಬಾನು ಇಬ್ಬರು ಸೇರಿ, ದೊಡ್ಡವಾದರೆ ೪೦೦, ಸಣ್ಣವಾದರೆ ೬೦೦ ಹಪ್ಪಳಗಳನ್ನು ದಿನವೊಂದಕ್ಕೆ ತೀಡುತ್ತಾರೆ. ತಾಯಿಗೆ ಈ ಹಣವನ್ನು ಉಳಿಸಿದರೆ ಮನೆಗೆ ಬೇಕಾಗುವ ಸಾಮಾನುಗಳನ್ನು ಕೊಳ್ಳಲು ಚೀಟಿಹಾಕಬಹುದು. ಮಗಳು ಪೂರ್ಣ ತನ್ನ ಖರ್ಚಿಗೇ ವಿನಿಯೋಗಿಸುತ್ತಾಳೆ. ೬ ಕಾಸೋ ೩ ಕಾಸೋ ನಾನು ದುಡಿದು ಸಂಪಾದಿಸಿದ್ದೆಂಬ ಹೆಮ್ಮೆಗಾಗಿ ಈ ಕೆಲಸ ಬಿಡಲು ಆಕೆ ತಯಾರಿಲ್ಲ, ಆದರೆ ಅಣ್ಣಂದಿರ ಆಕ್ಷೇಪಣೆ ಉಂಟು. "ನಾವು ಕೊಡುತ್ತೇವೆ ನಿನಗೆ ಬೇಕಾದಷ್ಟು ಹಣವನ್ನು ಈ ಕೆಲಸ ಬೇಡ" ಎಂದು ಹೇಳುತ್ತಾರೆ. ಆದರೆ ಈಕೆ ಅವರೆಷ್ಟೇ ಕೊಡಲಿ ನೂರೋ, ಸಾವಿರವೋ ಅದು ಅವರಿಂದ ತೆಗೆದುಕೊಂಡಿದ್ದು ಎಂದಾಗುತ್ತದೆ. ಅದೇ ದಿನಕ್ಕೆ ೧೦ ಪೈಸೆ ನೇ ಇದರಿಂದ ಬಂದ್ರೂ ನನಗ ನಾನು ಸುಮ್ಮನೆ ಕುಳಿತಿಲ್ಲ, ನಾನೂ ಸಂಪಾದಿಸ್ತಾ ಇದ್ದೀನಿ. ಅಂತ ಎಷ್ಟು ಖುಷಿಯಾಗುತ್ತಲ್ಲ. ಅದೂ ಅಲ್ದೆ ನಮ್ಗೆ ದುಡ್ಡು ಬೇಕಾದಾಗ ಮತ್ತೊಬ್ಬರ ಹತ್ರ ಕೇಳೋದಕ್ಕೆ ಒಂಥರಾ ಸಂಕೋಚ ಆಗುತ್ತೆ ಎಂದು ಹೇಳುತ್ತಾರೆ, ಈಕೆಗೆ ಓದುವ ಆಸೆ, ಬೇರೆಲ್ಲರಂತೆ ಹೊರಗೆ ದುಡಿಯಬೇಕೆಂಬ ಆಕಾಂಕ್ಷೆ ತೀವ್ರವಾಗಿದೆ, ಆದರೆ ಅವಕ್ಕೆಲ್ಲ ಇವರ ಮನೆಯಲ್ಲಿ ಆಸ್ಪದವಿಲ್ಲ. ಅಗತ್ಯವಿರುಷ್ಟು ವಿದ್ಯೆಯಿಲ್ಲದಿರುವುದು, ಹೊರಗೆ ಹೋಗಿ ದುಡಿಯಲು

ಅವಕಾಶ ಇಲ್ಲದಿರುವುದು ಇವೆರಡು ಪ್ರಮುಖ ಕಾರಣದಿಂದಾಗಿ ಈಕೆ ಈ ಕೆಲಸವನ್ನು ಮಾಡಲು ಪ್ರಾರಂಭಿಸಿದರು. ಎಂದು ನಿಲ್ಲಿಸಲೇಬೇಕೆಂಬ ಒತ್ತಡ ಬರುತ್ತದೋ ತಿಳಿಯದು. ಪಡೆದಷ್ಟು ದಿನ ನಡೆಯಲಿ ಎಂಬ ಆಲೋಚನೆ.

೩೫ರ ಸರಸರವರಿಗೆ ೫ ಜನ ಮಕ್ಕಳು. ಮಕ್ಕಳೆಲ್ಲ ಇನ್ನೂ ಸಣ್ಣವರು. ಶಾಲೆಗೆ ಹೋಗುತ್ತಿದ್ದಾರೆ. ಮನೆಗೆಲಸ, ಮಕ್ಕಳನ್ನು ನೋಡಿಕೊಂಡು ದಿನಕ್ಕೆ ೪ ರೂ. ಸಂಪಾದಿಸುತ್ತಿದ್ದರು. ಆದರೆ ಆರೋಗ್ಯ ಸರಿಯಾಗಿರದೆ ಈ ಕೆಲಸ ಮುಂದುವರಿಸದೆ ಬಿಟ್ಟರು. ಜೊತೆಗೆ ಮನೆಯವರ ಆಕ್ಷೇಪಣೆ.

೮ ಜನರಿರುವ ರಜಿಯಾರವರ ಮನೆಯಲ್ಲಿ ಸಂಸಾರದ ರಥವನ್ನು ಮುಂದೆ ಎಳೆಯಲು ಇವರ ಸಂಪಾದನೆ ನಡೆಯುತ್ತಿದೆ. ಈ ಮುನ್ನ ಇವರೂ ಇವರ ಮನೆಯಲ್ಲಿನ ಗಂಡಸರೂ ಸಹ ಈ ಕೆಲಸದಲ್ಲಿ ಪಾಲ್ಗೊಂಡಿದ್ದರು. ಈಗ ಮಗ, ಬೇರೆಡೆ ಕೆಲಸಕ್ಕೆ, ಪತಿಯೂ ಸಣ್ಣ ಕೆಲಸವೊಂದಕ್ಕೆ ಹೋಗುತ್ತಿರುವುದರಿಂದ ಮನೆಯ ಹೆಂಗಸರೇ ಮಾಡುತ್ತಿದ್ದಾರೆ. ಆದರೂ ಜನ ಜಾಸ್ತಿಯಿರುವುದರಿಂದ ಗಂಡಸರಿಬ್ಬರ ಸಂಪಾದನೆಯಷ್ಟೇ ಸಂಸಾರಕ್ಕೆ ಸಾಲುವುದಿಲ್ಲ. ಇವರ ಮನೆಯಲ್ಲಿ ದಿನವೊಂದಕ್ಕೆ ೮೦೦, ೧೧೦೦, ೧೩೦೦ ಹಪ್ಪಳವನ್ನು ಲಟ್ಟಿಸುತ್ತಾರೆ. ಹೆಣ್ಣು ಮಕ್ಕಳಾಗಲೀ, ಇವರಾಗಲಿ ಮನೆಯಿಂದ ಹೊರಗೆ ಹೋಗಲಾಗುವುದಿಲ್ಲವಾದ್ದರಿಂದ ಮನೆಯ ಗಂಡಸರು ಹೋಗಿ ಹಪ್ಪಳದ ಹಿಟ್ಟನ್ನು ತರಬೇಕು, ಇಲ್ಲದಿದ್ದರೆ ಓನರ್ ಅವರೇ ತಂದುಕೊಡುತ್ತಾರೆ. ಇವರಿಗೆ ವಯಸ್ಸು ಆಗಿರುವುದರಿಂದ ಕೈ ಕಾಲು ನೋವು, ಸೊಂಟ ನೋವು, ಎದೆ ನೋವು ತಪ್ಪಿಲ್ಲ. ಆದರೆ ಕೆಲಸ ಬಿಟ್ಟರೆ ಕಷ್ಟ. ಆದ್ದರಿಂದ ಮುಂದುವರೆಸಿಕೊಂಡೇ ಬಂದಿದ್ದಾರೆ.

ಮೇಲಿನ ಸಮೀಕ್ಷೆಯಿಂದ ತಿಳಿದುಬರುವುದೇನೆಂದರೆ, ಅಲ್ಪಸ್ವಲ್ಪವನ್ನಾದರೂ ಗಳಿಸಲೇಬೇಕು, ಎಂದು ಹೊರಟವರೇ ಹೆಚ್ಚು. ಏಕೆಂದರೆ ಮನೆಯ ಪರಿಸ್ಥಿತಿ ಅವರನ್ನು ದುಡಿಮೆಗೆ ಪ್ರೇರಿಸುತ್ತದೆ. ಮನೆಯ ಖರ್ಚಿಗೆ, ಮಕ್ಕಳ ಓದಿಗೋ, ಅಥವಾ ಉಳಿತಾಯಕ್ಕೋ (ಉಳಿತಾಯ ಮಾಡುತ್ತೇವೆಂದು ಹೇಳಿದವರು ತೀರ ಕಮ್ಮಿ) ತೀರ ಅತ್ಯಗತ್ಯ ತಮ್ಮ ದುಡಿಮೆ ಎಂಬುದು ಇವರೆಲ್ಲರ ನಿಲುವು. ಶೇ ೩೦ ಮನೆಯ ಗಂಡಸರು ಈ ಕೆಲಸ ಮಾಡಲು ಒಪ್ಪಿಗೆ ನೀಡುವುದಿಲ್ಲ, ಕಾರಣ "ಮನೆಯ ಹೆಂಗಸರನ್ನು ಸರಿಯಾಗಿ ನೋಡಿಕೊಳ್ಳದೆ ದುಡಿಮೆಗೆ ಹಚ್ಚಿದ್ದಾರೆ" ಎಂಬ ಮಾತು ಬರುತ್ತದೆಂಬ ಹೆಂಜರಿಕೆ ಕೆಲವರಿಗಾದರೆ ಮತ್ತೆ ಕೆಲವರಿಗೆ ಸಂಪ್ರದಾಯದ, ಕಟ್ಟುಪಾಡಿನ ಅಡ್ಡಿ.

ಹಣದ ಅಗತ್ಯ ಬಹಳವಿರುವುದರಿಂದ ಹಾಗೂ ಸಂಘಟನೆಯ ಕೊರತೆ ಇರುವುದರಿಂದ ಮಾಲೀಕ ಕೊಟ್ಟಷ್ಟೇ ಹಣ ಪಡೆಯಬೇಕಾಗಿದೆ. ಕೆಲವರು ಧೈರ್ಯ ಮಾಡಿ ಹಣ ಹೆಚ್ಚಿಸಬೇಕೆಂದು ಕೇಳಿದವರು ಕೆಲಸ ಕಳೆದುಕೊಂಡಿದ್ದಾರೆ. ಇಲ್ಲವೇ ಮೊದಲಿನಂತೆ ಹೆಚ್ಚು ಹಪ್ಪಳದ ಹಿಟ್ಟನ್ನು ಕೊಡದೆ ಈ ಉದ್ಯೋಗದಿಂದ ದೂರವಿಡುತ್ತಾರೆ. ಮತ್ತೆ "ಬೇಕಿದ್ದರೆ ಮಾಡಿ ಇಲ್ಲದಿದ್ದರೆ ಬಿಡಿ" ಎಂಬ ಮಾತನ್ನೂ ಕೇಳಬೇಕಾಯ್ತು. ಒಂದಿಬ್ಬರು, ಎಲ್ಲರೂ ಒಟ್ಟಿಗೆ ಹೋಗಿ ಕೇಳಿದರೆ ಹೆಚ್ಚಿಸಬಹುದು ಎಂಬ ಮಾತು ಎಲ್ಲರಲ್ಲೂ ಇದೆ, ಆದರೆ ಇವರಿಗೆ ಅಧೈರ್ಯ, ಸಂಘಟನೆ ಬರಬೇಕಲ್ಲ. ಎಲ್ಲಿ ತಾವು ಇದನ್ನು ಬಿಡಬೇಕಾಗುವುದೋ ತಾವು ಬಿಟ್ಟರೂ ಈ ಕೆಲಸಕ್ಕೆ ಸಾಕಷ್ಟು ಜನ ತಯಾರಿದ್ದಾರೆ. ಓನರ್‌ಗೆ ಕೆಲಸ ಮಾಡುವವರು ಸಾಕಷ್ಟು ಜನ ಸಿಕ್ಕೇ ಸಿಗುತ್ತಾರೆ. ಆದರೆ ನಮಗೆ ಕೆಲಸ ಕೊಡುವವರಾರು? ಎಂಬ ಪ್ರಶ್ನೆಯೇ ಎಲ್ಲರದೂ. ಬೆಕ್ಕಿನ ಕುತ್ತಿಗೆಗೆ ಗಂಟೆ ಕಟ್ಟುವವರಾರು? ಎಂಬ ಸಮಸ್ಯೆಯೇ ಈಗ.

ಮೇಲಿನ ಸಮಸ್ಯೆಗೆ ಇನ್ನೂ ಒಂದು ಕಾರಣ ಇದೆ. ಅದೆಂದರೆ ಈ ಕೆಲಸ ಮಾಡುವ ಶ್ರಮಿಕರು ಒಬ್ಬರನ್ನೊಬ್ಬರು ಸಂಪರ್ಕಿಸದೇ ಇರುವುದು. ಹೆಚ್ಚಿನ ಜನರ ಮನೆಯಲ್ಲಿ ಮಕ್ಕಳೇ ಹೋಗಿ ಹಪ್ಪಳದ ಹಿಟ್ಟು ತರುತ್ತಾರೆ, ಇಲ್ಲವೇ ಮನೆಯಲ್ಲಿನ ವಯಸ್ಸಾದ ಹೆಂಗಸರು, ಗಂಡಸರು ಹೋಗಿ ತರುತ್ತಾರೆ. ಹಪ್ಪಳ ಅಗತ್ಯ ಹೆಚ್ಚಿದ್ದರೆ ಮಾಲಿಕರೇ ಹಪ್ಪಳದ ಹಿಟ್ಟು ಕಳುಹಿಸುವ ವ್ಯವಸ್ಥೆಯನ್ನು (ಕೆಲವು ಆಯ್ದ ಮನೆಗಳಿಗೆ) ಮಾಡುತ್ತಾರೆ.

ಮನೆಗೆಲಸಗಳ ನಡುವೆ ಸಮಯವನ್ನು ಹೊಂದಿಸಿಕೊಂಡು ಮನೆಯಲ್ಲೇ ಕುಳಿತು ಈ ಕೆಲಸ ಮಾಡುವ ಸ್ತ್ರೀಯರ "ಉತ್ಪಾದನೆ" ಕುಟುಂಬದವರ ಯಾರ ಕಣ್ಣಿಗೂ, ಮನಕ್ಕೂ ಬರುವುದೇ ಇಲ್ಲ. ಇದೂ ಮನೆಗೆಲಸದಂತೆ ಯಾರ ಗಣನೆಗೂ ಬಾರದೇ ಹೋಗುತ್ತಿದೆ. ಮನೆಯಲ್ಲೇ ದುಡಿವ ಗೃಹಿಣಿ ದಿನವೊಂದಕ್ಕೆ ೮ ಮೈಲಿ ದೂರ ಶ್ರಮಿಸಬೇಕಾದಾಗ ಹಾಕುವಷ್ಟು ಶಕ್ತಿಯನ್ನು ತನ್ನ ಮನೆಗೆಲಸಕ್ಕೆ ಹಾಕುತ್ತಾಳೆ ಎಂದು ಸಂಶೋಧನೆಗಳಿಂದ ತಿಳಿದು ಬಂದಿದೆ. ಮನೆಗೆಲಸದೊಂದಿಗೇ ಹಪ್ಪಳ ತೀಡುವುದು, ಬೀಡಿ ಕಟ್ಟುವುದು, ಹೂ ಮಾರುವುದು........ಇತ್ಯಾದಿಗಳ ಕೆಲಸಗಳನ್ನೂ ಮಾಡಿಕೊಂಡು ಸಂಪಾದಿಸಿದರೂ ಅವಳ ಶ್ರಮಶಕ್ತಿಯಾಗಲಿ, ಸಂಪಾದನೆಯಾಗಲಿ ಯಾರೂ ಗಮನಿಸುವುದಿಲ್ಲ. ಸುಮ್ಮನೇ ಕುಳಿತು ಮಾಡುವುದೇನು ಹೇಗಾದರೂ ಮಾಡಿದರೆ ದುಡ್ಡು ಬರುತ್ತಲ್ಲ ಎಂಬ ಮಾತೂ ಕೇಳಿಬರುವುದುಂಟು. ಆದರೆ ಅವಳು ಈ ಕೆಲಸಕ್ಕೆ ಹಾಕಿದ ಶ್ರಮ, ಶಕ್ತಿಗೆ ತಕ್ಕಂತೆ ಫಲ ಸಿಗುವುದಿಲ್ಲ. ಸಾಲದಿದ್ದಕ್ಕೆ ಹೊರಗೆ ಹೋಗಿ ದುಡಿಯುವ ರೀತಿಯೇ ಇದೂ ಎಂದೂ ಯಾರೂ ಪರಿಗಣಿಸುವುದಿಲ್ಲ. ಇನ್ನು ದುಡ್ಡಿನ ಮಾತಂತೂ ದೂರವೇ ಉಳಿಯಿತು. ಬರುವ ನಾಲ್ಕು ಕಾಸು ಮನೆಯ ತೀರ ಅಗತ್ಯಗಳಿಗೆ ಹೋಗುತ್ತದೆಯೇ ಹೊರತು ಅದನ್ನು ಉಳಿಸಿಕೊಳ್ಳಲಾಗುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಈ ಕಾಯಕದಲ್ಲಿ ತೊಡಗಿರುವವರ ಶಕ್ತಿಗೆ, ಶ್ರಮಿಕಶಕ್ತಿಗೆ ತಕ್ಕಂಥ ಮೌಲ್ಯವಿನ್ನೂ ದೊರಕಿಲ್ಲ, ಬಂದ ಅಲ್ಪಸ್ವಲ್ಪ ಸಂಪಾದನೆಯೂ ಗಣನೆಗೇ ಬರುವುದಿಲ್ಲ,

## ಮಿನಿ ಕವನಗಳು

೧)

ಪದರಗಳನ್ನು ಕಿತ್ತೆಸೆಯುತ್ತ
ಬತ್ತಲಾಗುವ ಕ್ರಿಯೆ
ಪೊರೆ ಬಿಚ್ಚುವಂತೆ
ಹಗುರಾಗಬಹುದು
ಹೊಸತಾಗಬಹುದು
ಅದೃಷ್ಟವಿದ್ದಲ್ಲಿ
ಸ್ವದರ್ಶನವೂ ಆಗಬಹುದು.

೨)

ಉಂಡಿದ್ದು
ಅರಗಬೇಕು,
ರಕ್ತಗತವಾಗಬೇಕು,
ಅರಗದೆ
ಬರಿದೆ ಒಳಗುಳಿದಾಗ
ಜೀವ ಪೋಷಕವಾದದ್ದು
ಜೀವ ವಿರೋಧಿಯಾಗುತ್ತದೆ,
ಪ್ರಾಣಕ್ಕೆ
ಮುಳುವಾಗುತ್ತದೆ.

ಡಾ. ಎಚ್. ಎಸ್. ಸುಜಾತ.

---

ಜನವರಿ ಮಾನಸ ಸಂಚಿಕೆಯಲ್ಲಿ ಪ್ರಕಟವಾದ ಪ್ರತಿಭಾ ನಂದಕುಮಾರ್ ವಿರಚಿತ "ಆಟ" ನಾಟಕದ ದೃಶ್ಯ ನಾಲ್ಕರಲ್ಲಿ—(ಬೆಳಕು ಮೂಡಿದಾಗ...... .) ನಂತರ ಅಟವಾಡುವ ಹುಡುಗಿ..... ಕವನವನ್ನು ಓದಿಕೊಳ್ಳಬೇಕಾಗಿ ಓದುಗರಲ್ಲಿ ವಿನಂತಿ. ಘಟಿಸಿದ ಪ್ರಮಾದಕ್ಕಾಗಿ ಸರ್ವರಲ್ಲಿಯೂ ಕ್ಷಮೆ ಕೇಳುತ್ತೇನೆ.

ಸಂ–ಮಂ

---

# ಭಾರತದಲ್ಲಿ ಕೋಮುವಾದ

(ಒಂದು ವಿಶ್ಲೇಷಣೆ)

ಭಾರತದಲ್ಲಿ ಕೋಮು ಗಲಭೆಗಳು ದಿನದಿಂದ ದಿನಕ್ಕೆ ತೀವ್ರವಾಗುತ್ತಿವೆ. ಎಂಬುದನ್ನು ನಾವು ಗಮನಿಸುತ್ತಿದ್ದೇವೆ. ಮತ್ತು ಹಿಟ್ಟಿಗೂ ಬವಣೆ ಪಡುವ ಕಾಲದಲ್ಲಿ ಜನಪರವಾಗಿ ರೂಪುಗೊಳ್ಳಬೇಕಾದ ಚಳುವಳಿಗಳು ಜನ ವಿರೋಧಿ ದಿಕ್ಕನ್ನು ಅನುಸರಿಸಿವೆ ಎಂಬುದು ಶೋಚನೀಯ ಸಂಗತಿ

ಭಾರತದಲ್ಲಿ ಪ್ರಸ್ತುತ ಪ್ರಚಲಿತವಿರುವ ಕಾಶ್ಮೀರ ಸಮಸ್ಯೆ ಪಂಜಾಬಿನ ಸಿಖ್ಖರ ಖಲಿಸ್ಥಾನ ಬೇಡಿಕೆ. ಗೂರ್ಖಾ ಲ್ಯಾಂಡ್ ಸಮಸ್ಯೆ ಅಸ್ಸಾಮು ಸಮಸ್ಯೆಯಲ್ಲಿ ಅಡಕವಾದ ಪರಕೀಯ ದ್ವೇಷವಲ್ಲದೇ ರಾಮ ಜನ್ಮ ಭೂಮಿ ಮತ್ತು ಬಾಬ್ರಿ ಮಸೀದಿ-ಬಿಕ್ಕಟ್ಟಿನೊಳಗಾಟ ಹಿಂದೂ ಮುಸ್ಲಿಮರ ಧಾರ್ಮಿಕ ದ್ವೇಷ ಮುಂತಾದ ವಿಷಯಗಳು ಹೆಚ್ಚು ಗಂಭೀರ ರೀತಿಯಲ್ಲಿ ವಿಚಾರಿಸುವಂಥ ಮಟ್ಟವನ್ನು ತಲುಪಿವೆ. ಎಂದರೆ ತಪ್ಪಾಗಲಾರದು.

ಕೋಮುವಾದ ಮತ್ತು ಮತಾಂಧತೆ ಒಂದಕ್ಕೊಂದು ಪೂರಕವಾಗಿ ಬೆಳೆದು ಜನ ಜೀವನವನ್ನು ಕಲುಷಿತಗೊಳಿಸುತ್ತವೆ ಎಂಬುದು ಒಪ್ಪತಕ್ಕ ಅಂಶ. ಚುನಾವಣೆಗಾಗಿ ಅಭ್ಯರ್ಥಿಗಳ ಆಯ್ಕೆ, ಸಚಿವ ಸಂಪುಟದ ರಚನೆ ಮುಂತಾದ ರಾಜಕೀಯ ಕಾರ್ಯವ್ಯಾಪ್ತಿಯೊಳಗೆ ಬರುವ ವಿಚಾರಗಳಿಂದ ಡಿಹಿದು ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ ಮತ್ತು ಸರಕಾರಿ ಉದ್ಯೋಗಗಳಲ್ಲಿನ ನೇಮಕಾತಿಗಳಂಥ ಸಂಗತಿಗಳು ನಿರ್ಧಾರವಾಗುವುದು. ಕೋಮು ಮತ್ತು ಜಾತಿಯ ಆಧಾರಗಳಲ್ಲಿ ಆದ ಕಾರಣ ಜನರಲ್ಲಿ ಕೋಮುವಾದದ ಭಾವನೆ ಇನ್ನಷ್ಟು ಆಳವಾಗಿ ಬೇರೂರಿಸಲು ಸಹಾಯವಾಗಿದೆ. ಎಂದು ಹೇಳಬಹುದು. ಭಾರತದ ಇತಿಹಾಸವನ್ನು ಪರಿಶೀಲಿಸುವಾಗ ಸ್ವಾತಂತ್ರ ಪೂರ್ವದಲ್ಲಿ ಹಿಂದೂ ಮುಸ್ಲಿಮರೊಳಗೆ ಹೇಳಿಕೊಳ್ಳುವಂಥ ಕೋಮು ದ್ವೇಷ ಇರಲಿಲ್ಲ ಎಂಬುದನ್ನು ಗಮನಿಸಬಹುದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ದೇಶ ವಿಭಜನೆಯ ರೂಪದಲ್ಲಿ ಹಿಂದೂ ಮುಸ್ಲಿಮರ ನಡುವೆ ಅನೈಕ್ಯತೆಯ ಬೀಜ ಬಿತ್ತುವಲ್ಲಿ ದೇಶವನ್ನಾಳಿದ ಆಂಗ್ಲರು ಕಾರಣರಾದರು ಎಂಬುದು ಗಮನಿಸ ತಕ್ಕ ವಿಚಾರ. ಅಂದಿನಿಂದ ಇಂದಿನ ತನಕ ಆಗು ಹೋಗುಗಳನ್ನು ಗಮನಿಸಿದಾಗ ದೇಶದಲ್ಲಿ ಹಿಂದೂ ಮುಸ್ಲಿಮ ಘರ್ಷಣೆ ಮಧ್ಯ-ಮಧ್ಯ ಉಲ್ಬಣಗೊಂಡು ಕೆಲಕಾಲ ಮತ್ತೆ ಶಾಂತವಾಗುತ್ತಿದ್ದುದು ಗಮನಕ್ಕೆ ಬರುತ್ತದೆ. ಆದರೆ ಇಂಥ ಮತೀಯ ಗಲಭೆಗಳು ನಡೆದಾಗ ಹೆಚ್ಚಿನ ಹಾನಿಗೊಳಗಾಗುತ್ತಿದ್ದುದು ಬಡವರೇ ಎಂಬುದು ವಿಷಾದದ ಸಂಗತಿ.

ಚರಿತ್ರೆಯ ಪುಟಗಳನ್ನು ತಿರುವಿದಾಗ ಮತ್ತು ದೇಶದ ಇತ್ತೀಚಿನ ವಿದ್ಯಮಾನಗಳನ್ನು ಗಮನಿಸುವಾಗ ಭಾರತದಲ್ಲಿ ಕೋಮುವಾದ ಮತ್ತು ರಾಷ್ಟ್ರೀಯತೆ ಪರಸ್ಪರ ಒಂದನ್ನೊಂದು ಬೆಸೆದುಕೊಂಡಿದೆ ಎಂಬುದು ಸ್ಪಷ್ಟವಾಗಿದೆ. ಪಂಜಾಬ್ ಸಮಸ್ಯೆ ಬಿಟ್ಟರೆ ಈಗ ದೇಶದ ಮುಂದಿರುವ ಗಂಭೀರ ಸಮಸ್ಯೆ ಎಂದರೆ ಬಾಬ್ರಿ ಮಸೀದಿ ಮತ್ತು ರಾಮಜನ್ಮಭೂಮಿ ಕುರಿತಾದ ವಿವಾದ. ಬಾಬ್ರಿ ಮಸೀದಿಯೋ ಅಥವಾ ರಾಮ ಜನ್ಮ ಭೂಮಿಯೋ ಎಂಬ ವಿವಾದಕ್ಕೆ ಕಾರಣವಾದ ಅಯೋಧ್ಯೆ ಲಕ್ಷಾಂತರ ಜನರಲ್ಲಿ ಸಾಕಷ್ಟು ಹುಯಿಲನ್ನು ಎಬ್ಬಿಸಿ ಸ್ವಾತಂತ್ರ್ಯಾನಂತರದ 40 ವರುಷಗಳ ಧೀರ್ಘ ಅವಧಿಯಲ್ಲಿ ಭಾರತದ ಐಕ್ಯತೆಗೆ, ಸಮಗ್ರತೆಗೆ ಮತ್ತು ಮತೀಯ ಸಾಮರಸ್ಯಕ್ಕೆ ಧಕ್ಕೆ ತರುವಂತಿದೆ. ವಿವಾದಕ್ಕೆ ಒಳಗಾದ ಸ್ಥಳದ ಬಗ್ಗೆ ಹಿಂದೂ ಮುಸ್ಲಿಂ ಕೋಮುಗಳ ಏಕ್ತಾರರು ಸಾಕಷ್ಟು ಚಾರಿತ್ರಿಕ ದಾಖಲೆಗಳನ್ನೂ ಸಂಗ್ರಹಿಸಿದ್ದಾರೆ. ಈ ಘಟನೆಗಳ ಹಿನ್ನೆಲೆಯಲ್ಲಿ ಆರ್. ಎಸ್. ಎಸ್. ಮತ್ತು ವಿಶ್ವಹಿಂದೂ ಪರಿಷತ್ ಹಿಂದು ಯೇತರ ಕೋಮಿನವರ ಅನೇಕ ಆಪಾದನೆಗಳ ಸರಮಾಲೆಯನ್ನೇ ತಮ್ಮ ಕೊರಳುಗಳಿಗೆ ಧರಿಸಿ ಕೊಂಡಿದ್ದಾರೆ. ಹಿಂದೂ ಧರ್ಮದ ರಕ್ಷಣೆಯ ನೆಪದಲ್ಲಿ ಆರ್. ಎಸ್. ಎಸ್ ನ ಆಶೋತ್ತರಗಳು ಮುಸ್ಲಿಮರನ್ನು ಪ್ರತ್ಯೇಕವಾಗಿ ದೂರವಿರಿಸುವುದೇ ಆಗಿದೆ ಎಂದು ಮುಸ್ಲಿಮರು ದೂರುತ್ತಿದ್ದರೆ, ಹಿಂದು ಯೇತರರು ಹಿಂದೂ ಧರ್ಮ-ಜೀವನ ವಿಧಾನದ ಬದ್ಧ ವಿರೋಧಿಗಳೆಂದು ಬಲಪಂಥೀಯರು ಭಾವಿಸುತ್ತಿದ್ದಾರೆ.

ಹಿಂದೂ ಮುಸ್ಲಿಂ ದ್ವೇಷದ ಉರಿ ಹೆಚ್ಚಿಸುವ ಇನ್ನೊಂದು ಸಂಘಟನೆ ಜಮಾತೆ, ಇಸ್ಲಾಮಿ ರಾಜ್ಯದ ಭ್ರಮೆಯನ್ನು ನೆಚ್ಚಿಕೊಂಡಿದೆ. ಜಮಾತೆ ಇಸ್ಲಾಮಿ ಸಂಘಟನೆಯ ಸ್ಥಾಪಕ ಮೌಲಾನಾ ಮೌದೂದಿಯವರು ಪ್ರಜಾಪ್ರಭುತ್ವ, ಜಾತ್ಯಾತೀತ ರಾಷ್ಟ್ರೀಯ ಪ್ರಜಾಪ್ರಭುತ್ವದ ಪರಿಕಲ್ಪನೆಯನ್ನು ಗೌರವಿಸುವುದೆಂದರೆ ಖುರಾನಿಗೆ ಅಗೌರವ ತೋರಿಸಿದಂತೆ ಎನ್ನುತ್ತಿರುವ ಜಮಾತೇ ಇಸ್ಲಾಮಿನ ಧೋರಣೆಗಳು ಪ್ರತಿಗಾಮಿ ದೃಷ್ಟಿಕೋನವನ್ನು ಹೊಂದಿವೆ.

ಇವೆಲ್ಲವನ್ನು ಗಮನಿಸುವಾಗ ಪ್ರತಿಯೊಂದು ಕೋಮಿನವರು ಪ್ರತ್ಯೇಕತೆಯನ್ನು ಸಾಧಿಸುವುದು ಕಂಡು ಬರುತ್ತಿದೆ ಪ್ರತಿಯೊಂದು ಕೋಮು ಘರ್ಷಣೆಗಳ ಹಿನ್ನೆಲೆಯು ಆರ್ಥಿಕ ಅಸಮಾನತೆಯಿಂದಹುಟ್ಟಿ ಕೊಂಡಿದ್ದರೂ ಬಂಡವಾಳ ಶಾಹಿ ಹಿತಾಸಕ್ತಿಗಳು ಮತ್ತು ರಾಜಕೀಯ ಧುರೀಣರು ಅಂಥ ಗೊಂದಲಗಳಿಗೆ ಕೋಮುವಾದದ ತೇಪೆ ಹಚ್ಚಿ ತಮ್ಮ ಅಧಿ

# ನೆಲೆ ಕಂಡ ಬದುಕು

"ಮನೇಲಿ ಇದ್ದು ಸುಮ್ಮನೆ ಕಾಲ ಕಳೆಯುವುದಕ್ಕಿಂತ ನಾಲ್ಕು ಕಾಸು ಸಂಪಾದನೆ ಮಾಡೋದ್ರಲ್ಲಿ ಏನು ತಪ್ಪಿದೆ? ನಮಗೆ ಬೇಕಾದ ಸಣ್ಣಪುಟ್ಟ ಸಾಮಾನುಗಳಿಗಾಗಿ ಮನೆಯ ಗಂಡಸರ ಹತ್ತಿರ ಕೈ ಚಾಚುವುದು ತಪ್ಪುತ್ತೆ" ಹೀಗೆ ಹೇಳುತ್ತಾ ವಿಶಾಲಾಕ್ಷಮ್ಮ ತಾವು ಹಚ್ಚಿದ ಎಲೆಗಳನ್ನು ನನ್ನ ಮುಂದೆ ಹಿಡಿದರು. ವಿಶಾಲಾಕ್ಷಮ್ಮನಿಗೆ ಸುಮಾರು 70 ವರ್ಷ ವಯಸ್ಸಾದರೂ ದೇಹ ಸೋತಿರಲಿಲ್ಲ, ಸೊಂಟ ಬಾಗಿರಲಿಲ್ಲ. ಈ ಇಳಿವಯಸ್ಸಿನಲ್ಲಿ ಅವರ ಆರೋಗ್ಯ ನೋಡಿ ಆಶ್ಚರ್ಯವಾಯಿತು. "ಬ್ರಾಹ್ಮಣ ಕುಟುಂಬದಿಂದ ಬಂದಿದ್ದರೂ ರಾಗಿ ಮುದ್ದೆಯನ್ನು ಚಿಕ್ಕವಳಾಗಿದ್ದಾಗಿನಿಂದ ತಿನ್ನುವುದನ್ನು ರೂಢಿಮಾಡಿಕೊಂಡಿದ್ದೇನೆ. ಒಂದು ದಿನ ಹಿಟ್ಟು ಇಲ್ಲ ಅಂದ್ರೆ ಆಗಲ್ಲ. ಹಿಟ್ಟು ಇದ್ರೇನೆ ಊಟ ಮಾಡಿದ ಹಾಗೆ" ಎನ್ನುತ್ತಾ, "ಈ ವಯಸ್ಸಿನಲ್ಲಿ ನಾನೇ ಹೋಗಿ ಎಲೆ ಕಿತ್ತುಕೊಂಡು ಬರ್ತೀನಿ. ಎಲೆ ಸಿಗುವ ಕಾಲದಲ್ಲಿ ಎಲೆ ಸಂಗ್ರಹ ಮಾಡಿ ಇಟ್ಟುಕೊಂಡು ನಂತರ ದಿನಾ ಕುಳಿತುಕೊಂಡು ಹಚ್ಚುತ್ತೇನೆ. ನಾನು ಊರಲ್ಲಿ ಇಲ್ಲದಿರುವ ಸಮಯದಲ್ಲಿ ನನ್ನ ಮೊಮ್ಮಗಳಿಗೆ ಈ ಜವಾಬ್ದಾರಿ ವಹಿಸಿದ್ದೇನೆ. ಅವಳು ಅದನ್ನು ಮಾರಿ ಲೆಕ್ಕ ಇಟ್ಟುಕೊಂಡು ಅದನ್ನು ನನಗೆ ಒಪ್ಪಿಸುತ್ತಾಳೆ."

"ಮೊದಲು ನಾನು ಮನೇಲಿ ಕೆಲ್ಸ ಎಲ್ಲ ಮುಗಿದ ಮೇಲೆ ಸುಮ್ನೆ ಕೂಳಿತುಕೊಂಡ. ಏನು ಮಾಡುವುದು ಅಂತ ಶುರುಮಾಡಿದೆ. ಖರ್ಚಾದಷ್ಟು ಆಗಲಿ. ಶುರುಮಾಡಿದಾಗ ನನ್ನನ್ನು ಕೆಲವರು ಕುಹಕದಿಂದ ಮಾತನಾಡಿಸಿದರು, 'ಓಹೋ! ಏನು ನಿಮ್ಮ ಸಂಪಾದನೆ' ಅಂತ ಮೂಗು ಮುರಿದವರುಂಟು. 'ಏನು ಈಗ ವಿಶಾಲಾಕ್ಷಮ್ಮನವರದು ಸ್ವತಂತ್ರ ಜೀವನ' ಎಂದವರುಂಟು. 'ಏನು ಬರೋ ನಾಲ್ಕು ಕಾಸಿನಿಂದ್ಲೆ ಜೀವನ ಮಾಡಲಿಕ್ಕಾಗುತ್ತಾ' ಎಂದು ವ್ಯಂಗ್ಯವಾಡಿದ್ದರು."

"ಆದರೆ ನಾನು ಇದಕ್ಕೆಲ್ಲಾ ಹಿಂಜರಿಯಲಿಲ್ಲ. ಹಠದಿಂದ ಮಾಡಿದೆ. ಮೊದಮೊದಲು ನಮ್ಮ ಮನೆಯಲ್ಲಿ ಎಲೆ ಸಿಗುತ್ತೆ ತೆಗೆದುಕೊಂಡು ಹೋಗಿ ಎಂದು ಹೇಳುತ್ತಿದ್ದೆ. ಹೀಗೆ ಜನರಿಗೆ ಪರಿಚಯವಾಯಿತು. ಈಗ ಮದುವೆ ಸೀಜನ್ ಬಂದಿತು ಎಂದರೆ ಸುಮಾರು 250-300 ರೂ. ಸಂಪಾದನೆ ಮಾಡ್ತೀನಿ. ನನ್ನ ಕೈಯಲ್ಲಿ ಚಿಕ್ಕ ಪುಟ್ಟದಕ್ಕೆ ಕಾಸು ಇದ್ದೆ ಇರುತ್ತೆ. ಅದೇ ಹೊತ್ತಿಗೆ 5 ರೂ. ಬೇಕಂದ್ರೆ ಯಾರು ಕೊಡ್ತಾರೆ, ಈಗ ನಾನು ಹೆಚ್ಚೋ ಎಲೆಗೆ ತುಂಬಾ ಬೇಡಿಕೆಯುಂಟು. ಈ ಸುತ್ತಮುತ್ತ ಊರಲ್ಲಿ ಮದುವೆ ಮನೆಗೆ ನಾನು ಹಚ್ಚಿದ ಎಲೇನೆ ಆಗಬೇಕು. ನಾನು ತುಂಬಾ ನಾಜೂಕಿನಿಂದ ಹಚ್ಚೋ ಎಲೇನಾ ಇಲ್ಲ ಜನಾ ತುಂಬಾ ಇಷ್ಟಪಡ್ತಾರೆ" ಎಂದು ಬೀಗಿ ನುಡಿಯುತ್ತಾರೆ.

ಎಲೆ ಸಿಗುವ ಸಮಯದಲ್ಲಿ ಮನೆಕೆಲಸ ಮುಗಿಸಿ, ಬಿಸಿಲು-ಚಳಿ ನೋಡದೆ ಎಲೆ ಕೊಯ್ದುಕೊಂಡು ಇಟ್ಟುಕೊಳ್ಳುತ್ತೇನೆ ಆಮೇಲೆ ಒಣಗಿಸಿದ ಮೇಲೆ ಮಧ್ಯಾಹ್ನದಲ್ಲಿ ಕುಳಿತುಕೊಂಡು ಹಚ್ಚುತ್ತೇನೆ. ಮನೆಗೇ ಜನ ಬಂದು ತೆಗೆದುಕೊಂಡು ಹೋಗ್ತಾರೆ. ನನ್ನ ಕಾಲಕ್ಕೆ ಈ ಕೆಲ್ಸ ಮುಗಿಸಿ ಬಿಡಬೇಡಿ. ನೀವು ಇದನ್ನು ಮುಂದುವರೆಸಿಕೊಂಡು ಹೋಗಿ ಗಂಡಸರ ಕೈಚಾಚೆಚುನ ಬದಲು ನಾವು ಸಂಪಾದಿಸಿದ ನಾಲ್ಕು ಕಾಸು ಇದ್ರೆ ಹೊತ್ತಿಗೆ ಆಗುತ್ತೆ ಅಂತ ನಾನು ನನ್ನ ಮೊಮ್ಮಕ್ಕಳಿಗೆ ಹೇಳ್ತಾ ಇರ್ತೀನಿ" ಅನ್ನುತ್ತಾ ಎಲೆಗಳನ್ನು ಒಳಗಿಟ್ಟರು.

ವಿಶಾಲಾಕ್ಷಮ್ಮನಿಗೆ ವಯಸ್ಸಾಗಿದೆ. ನಾಲ್ಕು ಕಾಸು ಸಂಪಾದಿಸಲೇಬೇಕೆಂಬ ಪರಿಸ್ಥಿತಿ ಮನೆಯಲಿಲ್ಲ. ಸಂಬಂಧಿಕರು ಬಂಧು ಬಳಗ ದೊಡ್ಡದು. ಎಲ್ಲರೂ ಪ್ರೀತಿಯಿಂದಲೇ ನೋಡಿಕೊಳ್ಳುವವರೇ. ಅವರಲ್ಲಿ ಹುಮ್ಮಸ್ಸು, ಸ್ವಾಭಿಮಾನ ಕಂಡು ಆಶ್ಚರ್ಯವಾಯಿತು.

ಹಳ್ಳಿಗಳಲ್ಲಿ ಮನೆಯಲ್ಲಿದ್ದು ಮನೆಗೆಲಸ, ಹೊಲದ ಕೆಲಸ, ಕೊಟ್ಟಿಗೆ ಕೆಲಸ ಮುಂಜಾನೆಯಿಂದ ಸಂಜೆಯವರೆಗೆ ಗೆಯ್ದರೂ ಹೆಂಗಸರ ದುಡಿಮೆ ಅಗೋಚರ. ಜೊತೆಗೆ ಹಣಕಾಸಿನ ಸಂಪೂರ್ಣ ವ್ಯವಹಾರ ಮನೆಯ ಯಜಮಾನ ನೆನಿಸಿಕೊಂಡ ಪುರುಷರ ಕೈಯಲ್ಲಿ ನಾಲ್ಕಾಣೆ ಎಂಟಾಣೆಗೂ ಮನೆಯ ಗಂಡಸರಲ್ಲಿ ಕೈ ಚಾಚಿ ತೆಗೆದು ಕೊಳ್ಳಬೇಕಾದ ಸನ್ನಿವೇಶವಿರುವ ಕೌಟುಂಬಿಕ ಪರಿಸರದಲ್ಲಿ ವಿಶಾಲಾಕ್ಷಮ್ಮನವರ ಧೋರಣೆ-ಸ್ವಾಭಿಮಾನ ನಮ್ಮ ಸ್ತ್ರೀಯರಿಗೆ ಮಾದರಿಯಾಗುವಂಥದು.

---

ಕಾರ್ಯದ ನೆಲೆಗಟ್ಟನ್ನು ಭದ್ರ ಪಡಿಸಲು ಯತ್ನಿಸುವುದು ಕಂಡು ಬರುತ್ತದೆ. ಯಾವುದೇ ಕೋಮು ಆರ್ಥಿಕವಾಗಿ ಉನ್ನತಿಗೇರುವುದು ಇನ್ನೊಂದು ಕೋಮಿನ ಸ್ಥಾಪಿತ ಹಿತಾಸಕ್ತಿಗಳ ರಾಜಕೀಯ ಹಿಡಿತಕ್ಕೆ ಮಾರಕವಾಗುತ್ತದೆ ಎಂಬುದನ್ನು ಮನಗಂಡಾಗ ಅವರು ತಮ್ಮ ಕೋಮಿನ ದುಡಿಯುವ ವರ್ಗವನ್ನು ಇನ್ನೊಂದು ಕೋಮಿನ ದುಡಿಯುವ ವರ್ಗದ ಮೇಲೆ ಛೂ ಬಿಡುವುದು ಗ್ರತಿ ಕೋಮು ಘರ್ಷಣೆಗಳಲ್ಲಿ ಎದ್ದು ಕಾಣುವ ಅಂಶ. ಇದು ಬಂಡವಾಳಶಾಹಿ ವ್ಯವಸ್ಥೆ ಮತ್ತು ಆರ್ಥಿಕ ಉನ್ನತಿಗಾಗಿ ದುಡಿಯುವ ವರ್ಗಗಳ ನಡುವೆ ಪೈಪೋಟಿ ನಡೆಯಿಸುವುದಕ್ಕೆ ಪ್ರೇರಕವಾಗಿದೆ. ಇವೆಲ್ಲ ನಮ್ಮ ಸಮಾಜ ಅಮಾನವೀಯತೆಯ ತುತ್ತ ತುದಿಗೇರಿದೆ ಎಂದು ಸಾರುತ್ತವೆ. ಯಾವುದೇ ಕೋಮಿನ ತತ್ವಗಳು ಮಾನವೀಯಯ ಆಧಾರದ ಮೇಲೆ ನಿಂತಾಗ ಮಾತ್ರ ಉದಾತ್ತವಾಗಬಲ್ಲವು. ಅಮಾನವೀಯತೆಯನ್ನು ವೈಭವೀಕರಿಸುವ ಯಾವುದೇ ತತ್ವಗಳು ಎಂದಿಗೂ ಉದಾತ್ತವಾಗಲಾರವು ಎಂಬುದು ಎಲ್ಲರೂ ಯೋಚಿಸತಕ್ಕ ವಿಚಾರ.

ಕೆ. ಶಾರದಾ ಭಟ್.

---

# ನನ್ನ ಅವ್ವ



ನನ್ನ ಅವ್ವ,

ತನ್ನ ಸಂಗಾತಿ ನನ್ನಪ್ಪನ ತಾಳಕ್ಕೆ ಗೆಜ್ಜೆಕಟ್ಟಿ ಕುಣಿದಳು
ಅವಳ ಕುಣಿತದಲ್ಲಿ ಅಪ್ಪ ತನ್ನ ಒಡಹುಟ್ಟಿದವರ
ರಾಗಕೆಲ್ಲ ತಾಳ ಹಾಕಿದ ಅವ್ವನನ್ನೂ ಕುಣಿಸಿದ
ರಾಗದಾರ್ಭಟಿ ಮಿತಿ ಮೀರಿದಾಗ
ಅಪ್ಪ ಅರಿವು ಮೂಡಿ ತಾಳ ಹಾಕುವುದನ್ನು ನಿಲ್ಲಿಸಿದ
ಕುಣಿದು ದಣಿದ ಅವ್ವ ಕುಣಿತ ನಿಲ್ಲಿಸಿದಳು
ಹಾಸಿಗೆ ಇದ್ದಷ್ಟು ಕಾಲು ಚಾಚಬೇಕೆಂದ ಹಿರಿಯರ ಮಾತನ್ನು
ಚಾಚೂ ತಪ್ಪದ ಅಮ್ಮ ಮುದುಡಿಯೇ ಮುದುಡಿ ಮಲಗಿದಳು
ತನ್ನ ಕರುಳುಗಳಿಗೆ ಊಟಕ್ಕಿಟ್ಟ ಅವ್ವ ಏಕಾದಶಿ ಶಿವರಾತ್ರಿ
ಮಾಡಿದಳು

ಬಾಳಿನ ಜಳಕ್ಕೆ ಸಿಕ್ಕು ಕರುಕಾದ ನನ್ನವ್ವನ ಕನಸುಗಳು
ಅರಳಲಿಲ್ಲ, ಚಿಗುರಲಿಲ್ಲ.
ಅವಳ ಹತ್ತಿಕ್ಕಿದ ಯೌವನದ ಆಸೆ ಆಕಾಂಕ್ಷೆಗಳು
ರೆಕ್ಕೆ ಪುಕ್ಕ ಕಟ್ಟಲಿಲ್ಲ.
ಅವಳಿಂದ ನೀರೆರೆಸಿಕೊಂಡ ರೆಂಬೆಕೊಂಬೆಗಳೆಲ್ಲಾ
ಇಂದು ಚಿಗುರಿ ಹೂ ಕಾಣುತ್ತಿದ್ದರೂ
ತಂಪು ಕಾಣದೆ, ಅರೆಹುಚ್ಚಿ, ಖರೆಹುಚ್ಚಿಯಾಗಿದ್ದಾಳೆ,
ತನ್ನ ನನಸಾಗದ ಕನಸುಗಳೆಲ್ಲ ಅವಳಿಗೆ
ಈಗ ದಿಗಿಲು ಹುಟ್ಟಿಸಿ ಕುಣಿಯುತ್ತಿವೆ!
ಕರಿಭೂತಗಳಂತೆ ಕಾಡುತ್ತಿವೆ!

ದುರ್ಗಾಸುತೆ.

# ಚಂದ್ರಲೇಖ

ವೇದ.

ಚಂದ್ರಲೇಖಳಿಗೆ ಸಂಜೆ ಸಮುದ್ರ ತೀರದ ತಿರುಗಾಟವೆಂದರೆ ಬಹಳ ಇಷ್ಟ. ದಿನವೂ ಅವಳು ಸಂಜೆ ಸಮುದ್ರದ ಅಲೆಯ ಆಟವನ್ನು ನೋಡುತ್ತಾ, ಗಾಳಿಗೆ ಮೈವೊಡ್ಡಿ ಪ್ರಪಂಚವನ್ನೇ ಮರೆಯುತ್ತಿದ್ದಳು. ಹೀಗೆ ಒಂದು ದಿನ ಸಮುದ್ರ ತೀರದಲ್ಲಿ ಮೈಮರೆತು ಕುಳಿತಿರುವಾಗ ಯಾರೋ ಅಳುವ ಸದ್ದು ಕೇಳಿ ಸುತ್ತಲು ನೋಡಿದಳು. ಅವಳಿಗೆ ಯಾರೂ ಕಾಣಿಸಲಿಲ್ಲ. ಧ್ವನಿ ಬರುವ ದಿಕ್ಕಿಗೆ ನಡೆಯತೊಡಗಿದಳು. ಸ್ವಲ್ಪ ದೂರ ನಡೆದ ಮೇಲೆ ಮಧ್ಯ ವಯಸ್ಸಿನ ಒಬ್ಬ ಹೆಂಗಸು ನೆಲದ ಮೇಲೆ ಬೋರಲು ಮಲಗಿ ದಾರುಣವಾಗಿ ರೋಧಿಸುತ್ತಿದ್ದಳು. ಚಂದ್ರಲೇಖ ಮಂಡಿಯೂರಿ ಕುಳಿತು ಕನಿಕರದಿಂದ, "ಅಮ್ಮ, ಏಕೆ ಅಳುತ್ತಿರುವಿರಿ?" ಎಂದು ಕೇಳಿದಳು. ಆಗ ಆಕೆ, "ಹೇಳುತ್ತೇನೆ ಮಗಳೆ, ಹೇಳುತ್ತೇನೆ ಕೇಳು. ನೀನೆ ಅಲ್ಲ, ಯಾವ ಕಾಗೆ, ಗುಬ್ಬಿ, ಇರುವೆ ಕೇಳಿದರೂ ನನ್ನ ಕಥೆಯನ್ನು ಹೇಳುತ್ತೇನೆ. ಯಾಕೆ ಗೊತ್ತೇ? ಯಾರಿಂದ ನನ್ನ ಮಗನನ್ನು ಬಿಡಿಸಿ ತರುವುದಕ್ಕೆ ಸಾಧ್ಯವೋ ನನಗೆ ತಿಳಿಯದು. ಕೇಳಿದ ಯಾರಾದರೂ ಧೈರ್ಯಮಾಡಿ ನನ್ನ ಮಗನನ್ನು ಕರೆದು ತರುವರೋ ಎಂದು ನನ್ನ ಪ್ರಾಣ ಇರುವವರೆಗೂ ಹೇಳುತ್ತಿರುತ್ತೇನೆ. ಆದರೆ ಇದುವರೆಗೂ ಕೇಳಿದ ಯಾವ ಗಂಡೂ ಧೈರ್ಯ ಮಾಡಲಿಲ್ಲ. ಆದರೂ ಹೇಳುತ್ತೇನೆ. ಮಗಳೆ ನಮ್ಮದು ಅಮರಾಪುರವೆಂಬ ಬಹು ಸುಂದರ ರಾಜ್ಯ. ನಮಗೆ ಬಹುಕಾಲಕ್ಕೆ ಒಬ್ಬನೆ ಒಬ್ಬ ಮಗ ಹುಟ್ಟಿದ. ಅವನ ರೂಪವನ್ನು ನೋಡಿ ಮರುಳಾಗದವರೇ ಇಲ್ಲ. ಅವನು ದೊಡ್ಡವನಾದ ಹಾಗೆ ಅವನ ಸುಂದರವಾದ ಮೊಗವನ್ನು ನೋಡಲು ಎರಡು ಕಣ್ಣು ಸಾಲದಾಯಿತು. ಅವನಿಗೆ ಸಮುದ್ರ ಸಂಚಾರವೆಂದರೆ ಬಹು ಪ್ರಿಯ. ಅವನಿಗೆ ಪ್ರತಿ ಹುಣ್ಣಿಮೆಯ ರಾತ್ರಿ ಸಮುದ್ರ ವಿಹಾರ ಮಾಡುವುದು ಅಭ್ಯಾಸ. ಒಂದು ಹುಣ್ಣಿಮೆಯ ರಾತ್ರಿ ವಿಹಾರ ಮಾಡುವಾಗ ಸಮುದ್ರ ರಾಕ್ಷಸಿ ಅವನನ್ನು ಹಿಡಿದು ಸಮುದ್ರದೊಳಗೆ ಮಾಯವಾದಳು. ಆಗ ನನ್ನ ಪತಿಯು ಮಗನನ್ನು ಹುಡುಕುತ್ತಾ ಸಮುದ್ರ ತಳಕ್ಕೆ ಹೋದವರು ಬರಲೇ ಇಲ್ಲ" ಎಂದು ಮತ್ತೆ ಅಳಲು ಪ್ರಾರಂಭಿಸಿದಳು. ಸ್ವಲ್ಪ ಹೊತ್ತು ಯೋಚಿಸಿದ ಚಂದ್ರಲೇಖ, "ನೀವು ಹೆದರಬೇಡಿ ಅಮ್ಮ, ನಾನು ನಿಮ್ಮ ಮಗನನ್ನು ಹಾಗೂ ಪತಿಯನ್ನು ಹುಡುಕುವೆ" ಎಂದಳು. "ಅಷ್ಟು ಮಾಡು ಮಗು, ನಾನು ನಿನಗೆ ಚಿರಋಣಿಯಾಗಿರುತ್ತೇನೆ, ಮತ್ತೆ ನಮ್ಮ ಸಂಪತ್ತನ್ನೆಲ್ಲಾ ನಿನಗೆ ಧಾರೆ ಎರೆಯುವೆ" ಎಂದು ದುಃಖಿಸಿದಳು.

ಹುಣ್ಣಿಮೆಯ ರಾತ್ರಿ ಚಂದ್ರಲೇಖ ಸುಂದರವಾಗಿ ಅಲಂಕರಿಸಿಕೊಂಡು ಸಮುದ್ರ ತೀರಕ್ಕೆ ಬಂದು ಒಂದು ದೋಣಿಯಲ್ಲಿ ಸಮುದ್ರ ವಿಹಾರ ಮಾಡತೊಡಗಿದಳು. ಸರಿ ರಾತ್ರಿಯ ಹೊತ್ತಿಗೆ ಅವಳಿಗೆ ಯಾರೊ ಪಾತಾಳಕ್ಕೆ ಸೆಳೆದೊಯ್ಯುತ್ತಿರುವಂತೆ ಭಾಸವಾಯಿತು. ಸ್ವಲ್ಪ ಸಮಯ ಕಳೆದ ಮೇಲೆ ಭವ್ಯವಾದ ಅರಮನೆಯೊಳಗೆ ಅವಳು ಬಂದಿದ್ದಳು. ಏನಿದು ಮಾಯೆ ಎಂದುಕೊಳ್ಳುವುದರೊಳಗೆ ದೊಡ್ಡ ಧ್ವನಿಯೊಂದು ಅವಳನ್ನು ಗದರಿಸಿ "ನೀನು ಯಾರು? ಯಾವ ಕಾರಣಕ್ಕಾಗಿ ಸಮುದ್ರದ ಮೇಲೆ ಅಲೆಯುತ್ತಿದ್ದೆ? ಎಂದು ಕೇಳಿತು. ಆಗ ಚಂದ್ರಲೇಖ ಏನು ಹೇಳುವುದು ಎಂದು ಯೋಚಿಸಲು ತಡಮಾಡಿದಳು. ಸ್ವಲ್ಪ ಹೊತ್ತಿನ ನಂತರ ಆ ಧ್ವನಿಯು, "ಯಾರನ್ನು ಕೇಳುತ್ತಿರುವುದು? ನೀನು ಕಿವುಡಿಯೇ? ಮೂಗಿಯೇ? ಮಾತನಾಡು" ಎಂದು ಗರ್ಜಿಸಿತು. ಅವಳಿಗೆ ಮಿಂಚು ಹೊಳೆದಂತಾಗಿ, "ಹೌದು, ನಾನು ಮೂಗಿ" ಎಂದು ಮೂಗಭಾಷೆಯಲ್ಲಿ ಅಭಿನಯಿಸುತ್ತಾ ತೋರಿಸಿದಳು. ಒಡನೆಯೆ ಒಂದು ಆಕಾರ ಪ್ರತ್ಯಕ್ಷವಾಗಿ, "ನೀನು ಮೂಗಿಯೆ ಪರವಾಗಿಲ್ಲ, ನಿನ್ನಂತಹ ಸುಂದರ ಮಾನವರೆಂದರೆ ನನಗೆ ಬಹು ಇಷ್ಟ. ಅವರನ್ನು ಕರೆತಂದು ನನ್ನ ಸೇವಕರನ್ನಾಗಿ ಮಾಡಿಕೊಳ್ಳುತ್ತೇನೆ" ಎಂದು ನುಡಿದಳು. ಅಷ್ಟರಲ್ಲಿ ಅವಳು ನಿಂತ ಭವನವೂ ಅವಳಿಗೆ ಚೆನ್ನಾಗಿ

ಕಾಣತೊಡಗಿತು. ಅಲ್ಲಿ ಅತಿ ಸುಂದರವಾದ ಹುಡುಗಿಯರು, ಹುಡುಗರು ಅವರ ಪಾಡಿಗೆ ಅವರು ತಮ್ಮ ಕೆಲಸಗಳನ್ನು ಮಾಡುತ್ತಾ ಓಡಾಡುತ್ತಿದ್ದರು. ಸಮುದ್ರ ರಾಕ್ಷಸಿಯು ಚಂದ್ರಲೇಖಳನ್ನು ಕುರಿತು, "ನೋಡು ಮೂಗಿ, ಇಲ್ಲಿ ಯಾರು ಒಬ್ಬರಿಗೊಬ್ಬರೂ ಮಾತನಾಡಬಾರದು. ಮಾತನಾಡಿದವರ ಶಿರವನ್ನು ತಕ್ಷಣ ಕತ್ತರಿಸಲಾಗುವುದು. ನೀನು ಮೂಗಿಯಾದ್ದರಿಂದ ನಿನಗೆ ಆ ತೊಂದರೆಯೇ ಇಲ್ಲ. ನೀನು ನನ್ನ ಸೇವಕಿಯಾಗಿರು. ಬಾ, ನನ್ನ ಜೊತೆಯಲ್ಲಿ" ಎಂದಳು. ಅಂದಿನಿಂದ ಚಂದ್ರಲೇಖ ಸೇವಕಿಯಾಗಿ ಹಗಲಿರುಳು ರಾಕ್ಷಸಿಯ ಜೊತೆಯಲ್ಲಿಯೇ ಇರತೊಡಗಿದಳು.

ಬಹಳ ದಿನಗಳ ನಂತರ ಸಮುದ್ರ ರಾಕ್ಷಸಿಯ ತಂಗಿ ಬೆಟ್ಟದ ರಾಕ್ಷಸಿ ಬಂದಳು. ಅಕ್ಕತಂಗಿಯರಿಬ್ಬರು ಬಹಳ ಸಂತೋಷದಿಂದ ಅವರ ವಿಷಯಗಳನ್ನು ಮಾತನಾಡತೊಡಗಿದರು. ಆಗ ಚಂದ್ರಲೇಖ ಒಬ್ಬಳೇ ಅವರ ಬಳಿ ಇದ್ದುದು. ಮಾತನಾಡುತ್ತಾ, ಮಾತನಾಡುತ್ತಾ ಸಮುದ್ರ ರಾಕ್ಷಸಿ ತನ್ನ ಪ್ರಾಣವನ್ನು ಅಡಗಿಸಿರುವ ಸ್ಥಳವನ್ನು ತಂಗಿಗೆ ಹೇಳಿದಳು. ಅವಳ ಪ್ರಾಣವನ್ನು ಅವಳ ತಲೆ ದಿಂಬಿನ ಒಳಗೆ ಒಂದು ಸಣ್ಣ ಗೊಂಬೆಯ ಹೊಟ್ಟೆಯಲ್ಲಿರುವುದೆಂದು.

ಯಾರು ಇಲ್ಲದ ಸಮಯ ನೋಡಿ ಚಂದ್ರಲೇಖ ರಾಕ್ಷಸಿಯ ತಲೆದಿಂಬನ್ನು ಬದಲಿಸಿ ಅದೇ ತರಹದ ಇನ್ನೊಂದು ತಲೆದಿಂಬನ್ನು ಇಟ್ಟುಬಿಟ್ಟಳು. ಪ್ರತಿ ಹುಣ್ಣಿಮೆ ರಾತ್ರಿ ರಾಕ್ಷಸಿ ಅವಳ ಭವನದಲ್ಲಿ ಇರುತ್ತಿರಲಿಲ್ಲ. ಆ ಸಮಯ ನೋಡಿ ಚಂದ್ರಲೇಖ ರಾಕ್ಷಸಿಯ ತಲೆ ದಿಂಬನ್ನು ಹರಿದು ಅದರಲ್ಲಿ ಇದ್ದ ಗೊಂಬೆಯನ್ನು ಕಲ್ಲಿನಿಂದ ಕುಟ್ಟಿ ಪುಡಿ ಪುಡಿ ಮಾಡಿ ಬೆಂಕಿಗೆ ಹಾಕಿಬಿಟ್ಟಳು. ಸಮುದ್ರದ ಮೇಲೆ ಅಲೆಯುತ್ತಿದ್ದ ರಾಕ್ಷಸಿಯು ವಿಕಾರವಾಗಿ ಕಿರುಚುತ್ತಾ ನೀರಿನೊಳಗೆ ಬಿದ್ದು ಪ್ರಾಣಬಿಟ್ಟಳು. ಒಡನೆಯೆ ರಾಕ್ಷಸಿ ಭವನದಲ್ಲಿ ಇದ್ದ ಸುಂದರ ಹುಡುಗಿ, ಹುಡುಗರು ಸಮುದ್ರ ತೀರದಲ್ಲಿದ್ದರು. ರಾಜಕುಮಾರನ ತಾಯಿ ಮಗ, ಗಂಡನನ್ನು ಸೇರಿಕೊಂಡಳು. ಚಂದ್ರಲೇಖಳನ್ನು ಕಂಡು ಅವಳು ಮಾಡಿದ ಉಪಕಾರವನ್ನು ಎಲ್ಲರಿಗೂ ವಿವರಿಸಿ ಕೊಂಡಾಡಿದ್ದರು. ರಾಣಿ ಈ ಮೊದಲು ಹೇಳಿದ ಪ್ರಕಾರ ಸಮಸ್ತ ರಾಜ್ಯವನ್ನೆ ಅವಳಿಗೆ ಕೊಟ್ಟು ಮಗನನ್ನು ಅವಳಿಗೆ ಕೊಟ್ಟು ಮದುವೆ ಮಾಡಿ ಗಂಡ, ಮಗ, ಸೊಸೆಯೊಂದಿಗೆ ಬಹುಕಾಲ ಸುಖವಾಗಿದ್ದಳು.

## ಮಹಿಳೆಯರಿಗೆ ಔದ್ಯೋಗಿಕ ಮೀಸಲಾತಿ

ಈಗಾಗಲೇ ನಮ್ಮ ರಾಜ್ಯದಲ್ಲಿ ಮಹಿಳೆಯರಿಗಾಗಿ ವಿಶೇಷ ನ್ಯಾಯಾಲಯ, ವಿಶೇಷ ಪೊಲೀಸ್ ಘಟಕಗಳನ್ನು ಸ್ಥಾಪಿಸಲಾಗಿದೆ. ಈ ಕೊಡುಗೆಗಳೊಂದಿಗೆ ಪಂಚಾಯತ್ ರಾಜ್‌ಗಳಲ್ಲೂ ಮಹಿಳೆಯರಿಗೆ ಮೀಸಲಾತಿ ತರಲಾಗಿದೆ. ಈಗ ಔದ್ಯೋಗಿಕ ರಂಗದಲ್ಲಿಯೂ ಮಹಿಳೆಯರಿಗೆ ವಿಶೇಷವಾಗಿ ವಿಧವೆಯರಿಗೆ, ಅವಿವಾಹಿತೆಯರಿಗೆ ಹಾಗೂ ದೇವದಾಸಿಯರಿಗೆ ಶೇ. 30ರಷ್ಟು ಸ್ಥಾನವನ್ನು ಮೀಸಲಿರಿಸುವುದಾಗಿ ರಾಜ್ಯಸರ್ಕಾರ ಪ್ರಕಟಿಸಿದೆ. 30ರ ವಯೋಮಾನ ಮೀರಿದ ಅವಿವಾಹಿತ ಮಹಿಳೆಯರಿಗೆ ಈ ಸೌಲಭ್ಯವನ್ನು ಒದಗಿಸುವುದಾಗಿ ಸಾರಿರುವ ಸರ್ಕಾರದ ಈ ಪ್ರಗತಿಪರ ಕ್ರಮವು ಎಲ್ಲರೂ ಮೆಚ್ಚುವಂತಿದೆ. ಸ್ತ್ರೀಯರ ಶೋಷಣೆಯನ್ನು ತಡೆಗಟ್ಟುವಲ್ಲಿ ಆರ್ಥಿಕ ಸ್ವಾತಂತ್ರ್ಯ ಪ್ರಮುಖವಾದುದು ಎಂಬ ಮಾತನ್ನು ಒಪ್ಪುವವರೆಲ್ಲ ಇದನ್ನು ಸ್ವಾಗತಿಸಿಯೇ ಇರುತ್ತಾರೆ. ಆದರೆ ಒಂದು ದೋಷವೆಂದರೆ, "ಸಂಪಾದಿಸುವವಳು" ಎಂಬ ಹೆಗ್ಗಳಿಕೆಗೆ ಪಾತ್ರಳಾದ ಹೆಣ್ಣಿನ ಮೇಲೇ ಹೆಚ್ಚು ಕಡಿಮೆ ಕುಟುಂಬದ ಎಲ್ಲ ಭಾರದನ್ನೂ ಹೇರಲಾಗಿದ್ದು, ಮೇಲಿನ ಸೌಲಭ್ಯ ಕೆಲವು ಸಂದರ್ಭಗಳಲ್ಲಿ ಅವಳ ಸಂಕಷ್ಟಗಳ ಸರಮಾಲೆಗೆ ಮತ್ತೊಂದಿಷ್ಟು ತನ್ನ ಕಾಣಿಕೆಯನ್ನೂ ಹೇರಬಹುದು. ಎಷ್ಟೋ ಮನೆಗಳಲ್ಲಿ ಹೆಣ್ಣು– ಆಕೆ ಹೆಂಡತಿ, ಮಗಳು, ಸೋದರಿ, ಸೊಸೆ ಯಾರೇ ಆಗಿರಲಿ,— ಉದ್ಯೋಗದಲ್ಲಿರುವವಳು ಎಂದರೆ ಸಾಮಾನ್ಯವಾಗಿ ತನ್ನ ಕುಟುಂಬದ ಜವಾಬ್ದಾರಿಯ ಸಂಪೂರ್ಣ ಹೊರೆ ಆಕೆಯದೇ ಆಗಿರುತ್ತದೆ. ಸಣ್ಣ ಪುಟ್ಟ ಉದ್ಯೋಗವಿದ್ದರೂ ಮನೆಯ ಕಡೆ ಗಮನ ಹರಿಸದೆ ತಾವಾಯಿತು ತಮ್ಮ ಪಾಡಾಯಿತು ಎಂಬಂತಿರುವ ಕೆಲ ಮಂದಿಯಿಂದ ಸಹಕಾರ ನಿರೀಕ್ಷಿಸುವುದೇ ಆ ಹೆಣ್ಣಿನ ದೋಷ ಎಂಬಂತೆ ಕಾಣಲಾಗುತ್ತಿದೆ. ಉದ್ಯೋಗದ ಮೀಸಲಾತಿಯಿಂದ ಮುಂದಿನ ದಿನಗಳಲ್ಲಿ ಇಂಥ ಕುಟುಂಬಗಳ ಸಂಖ್ಯೆ ಹೆಚ್ಚಬಹುದು. ಹೇಗೂ ಇರಲಿ, ಎಂಥ ಕಷ್ಟ ಬಂದರೂ ತನ್ನ ತುತ್ತಿಗೆ, ಅರಿವೆಗೆ ಎಂದು ಮತ್ತೊಬ್ಬರ ದೌರ್ಜನ್ಯ, ಹಿಂಸೆಗಳನ್ನು ತಾಳಿಕೊಂಡು ಬದುಕಬೇಕಲ್ಲ ಎಂಬ ನೋವಿನ ನಿಟ್ಟುಸಿರುಗಳ ಸಂಖ್ಯೆ ಸ್ವಲ್ಪವಾದರೂ ಕಡಿಮೆಯಾದೀತೆಂಬುದೇ ಸಧ್ಯದ ಸಮಾಧಾನ.

# ನಾನೊಂದು ಕನಸ ಕಂಡೆ

## ಕಮಲಾದೇವಿ ಚಟ್ಟೋಪಾಧ್ಯಾಯರ ಜೀವನ ಚರಿತ್ರೆ

ಲೇ.: ಡಾ. ಸರೋಜಿನಿ ಶಿಂತ್ರಿ
ಪ್ರ.: ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜ ಪೇಟೆ, ಬೆಂಗಳೂರು

"ಮಹಿಳೆಯರ ಆಂದೋಲನ ಮುಖ್ಯವಾಗಿ ಸಮಾಜದ ರೂಢಿಗಳ ವಿರುದ್ಧವಾಗಿದೆಯೇ ಹೊರತು ಪುರುಷ ವಿರೋಧಿ ಆಗಿಲ್ಲ, ಮಹಿಳೆಯರ ಹೀನ ಸ್ಥಿತಿಗೆ ಸಮಾಜದಲ್ಲಿ, ಬೇರುಬಿಟ್ಟ ಅನಿಷ್ಟ ಪದ್ಧತಿ ಕಾರಣ. ಆ ಪದ್ಧತಿಗಳ ನಿರ್ಮೂಲನೆಗೆ ಹೋರಾಡುವುದು ಇಬ್ಬರ ಕರ್ತವ್ಯವಾಗಿದೆ" ಅವರು ಮಹಿಳೆಯರ ಆರ್ಥಿಕ ಪರಿಸ್ಥಿತಿಯ ಮೇಲೆಯೂ ಕೆಲವು ಗಮನಾರ್ಹ ಅಭಿಪ್ರಾಯಗಳನ್ನು ವ್ಯಕ್ತಮಾಡಿದರು. "ಪುರುಷರು ಸ್ತ್ರೀಯರನ್ನು ಬಟ್ಟೆ-ಆಹಾರ ಕೊಟ್ಟು ಸಾಕಿ ಸಲಹುವರು ಎಂಬುದು ಸಮಾಜದ ಭ್ರಮೆ, ಆಕೆ ಮನೆಯಲ್ಲಿ ಮುಂಜಾನೆಯಿಂದ ಸ.ಜೆಯವರೆಗೆ ಮಾಡುವ ಕೆಲಸದಿಂದಲೇ ತನ್ನ ಬಟ್ಟೆ-ಆಹಾರಗಳನ್ನು ಪಡೆಯುತ್ತಾಳೆ. ಅವಳು ಯಾರ ದಯೆ ಹಾಗೂ ದಾನದ ಮೇಲೆ ಜೀವಿಸುವುದಿಲ್ಲ". ಮಹಿಳೆಯರು ತಮ್ಮ ಬಿಡುವಿನ ವೇಳೆಯನ್ನು, ಸಂಗೀತ, ನೃತ್ಯ, ಕೈಕೆಲಸ ಮೊದಲಾದವುಗಳನ್ನು ಕಲಿಯುವಲ್ಲಿ ಮತ್ತು ಕಲಿಸುವದರಲ್ಲಿ ಕಳೆಯಬೇಕು ಎಂದು ಕೇಳಿಕೊಂಡರು. ಅಲ್ಲದೆ ಇಡೀ ದೇಶಕ್ಕೆ ಒಂದೇ ತರಹದ ಕಾಯದೆ ಪದ್ಧತಿ ಅನ್ವಯವಾಗಬೇಕು ಎಂದು ಪ್ರತಿಪಾದಿಸಿದರು. ಕೊನೆಯದಾಗಿ ಕಾಲಕಾಲಕ್ಕೆ ಬಂದೊದಗುವ ವಿಪತ್ತುಗಳನ್ನು ಕೊನೆಗೊಳಿಸಿ ಸ್ವತಂತ್ರ ವಿಶ್ವದಲ್ಲಿ ಒಂದೇ ಕುಟುಂಬದ ಸದಸ್ಯರಂತೆ ಇದ್ದು ಕಾರ್ಯ ಮಾಡೋಣ, ಎಂದು ಕರೆಕೊಟ್ಟರು.

ಆ ಸಭೆಯಲ್ಲಿ ಆಗಿನ ಬಡೋದೆಯ ಮಹಾರಾಜರನ್ನು ಟೀಕಿಸುವ ಗೊತ್ತುವಳಿಯನ್ನು ಪಾಸುಮಾಡಲಾಯಿತು. ತಮ್ಮ ಸಂಸ್ಥಾನದಲ್ಲಿ ಜಾರಿಯಲ್ಲಿರುವ ಏಕಪತ್ನಿತ್ವ ಮತ್ತು ವಿವಾಹ ವಿಚ್ಛೇದನೆ ಕಾಯ್ದೆಗಳನ್ನು ಬದಿಗಿರಿಸಿ ತಾವೇ ಎರಡನೆಯ ವಿವಾಹವನ್ನು ಮಾಡಿಕೊಂಡು ಸಮಸ್ತ ಮಹಿಳೆಯರನ್ನೇ ರೊಚ್ಚಿಗೆಬ್ಬಿಸಿದ್ದರು. ಪರಿಷತ್ತಿನ ಅಧ್ಯಕ್ಷರಾಗಿ ಕಮಲಾದೇವಿಯವರು ಹೆಚ್ಚು ಉತ್ಸಾಹದಿಂದ ಕಾರ್ಯಕ್ಕೆ ಅಣಿಯಾದರು. ಬಂಗಾಲದ ಬರಗಾಲದ ಭೀಕರತೆ ಯಾರ ಸ್ಮೃತಿಪಟಲದಿಂದಲೂ ಅಳಿಸಿ ಹೋಗಿರಲಿಲ್ಲ. ಕಮಲಾದೇವಿಯವರು ಅನಾಥ ವ್ಯಕ್ತಿಗಳಿಗೆ ಮನೆ, ಬಡ ಮಕ್ಕಳಿಗಾಗಿ ಶಿಷ್ಯವೇತನಗಳು, ಹಿಂದುಳಿದ ಪ್ರದೇಶಗಳಲ್ಲಿ ಸಂಚಾರಿ ಆಸ್ಪತ್ರೆಯ ವ್ಯವಸ್ಥೆ ಮತ್ತು ಉದ್ಯೋಗಿ ಮಹಿಳೆಯರಿಗಾಗಿ ಹಾಸ್ಟೆಲ್‌ಗಳು ಮುಂತಾದ ಕಾರ್ಯಕ್ರಮಗಳನ್ನು ಕೈಗೆ ತೆಗೆದುಕೊಂಡರು.

"ಅಖಿಲ ಭಾರತ ಮಹಿಳಾ ಪರಿಷತ್ತಿನ ವರ್ತಮಾನ ಸ್ಥಿತಿಯ ಬಗ್ಗೆ ನಿಮ್ಮ ಅಭಿಮತವೇನು?" ಎಂದು ಕಮಲಾದೇವಿಯವರನ್ನು ಕೇಳಿದೆ. "ಪರಿಷತ್ತಿನ ಈಗಿನ ಆಗು-ಹೋಗುಗಳನ್ನು ನೋಡಿ ನನಗೆ ತುಂಬಾ ವ್ಯಥೆಯಾಗುತ್ತದೆ. ದೇಶ ಸ್ವಾತಂತ್ರ್ಯವನ್ನು ಪಡೆದು ಮೂವತ್ತು ವರುಷಗಳು ಸಂದರೂ ಪರಿಷತ್ತು ಬದಲಾದ ಪರಿಸ್ಥಿತಿಗೆ ಮಾರ್ಪಡಿಸಿಕೊಂಡು ಯಾವ ಪೂರ್ಣತೆ ಮತ್ತು ಪರಿಪಕ್ವತೆಯನ್ನು ಪಡೆಯಬೇಕಾಗಿತ್ತೋ ಅದನ್ನು ಪಡೆದಿಲ್ಲ. ಇದಕ್ಕೆ ವಿಪರೀತವಾಗಿ, ಪೂರ್ವದಲ್ಲಿ ಸಿಕ್ಕ ಪ್ರೌಢತೆ ಮತ್ತು ಗಂಭೀರತೆಗಳೂ ಕಳೆದುಹೋದಂತೆ ಭಾಸವಾಗುತ್ತದೆ. ಇತ್ತೀಚೆಗೆ ಪರಿಷತ್ತಿನ ಯೋಜನೆ ಮತ್ತು ಅನಿಶ್ಚಿತತೆ ಇವೆಲ್ಲವೂ ನನ್ನ ಮನಸ್ಸಿಗೆ ಖೇದವನ್ನುಂಟು ಮಾಡುತ್ತಿವೆ. ೧೯೪೭ರ ನಂತರ ಮಹಿಳಾ ಪರಿಷತ್ತಿನ ಜೀವನಶಕ್ತಿ, ಉತ್ಸಾಹ ಕಳೆಗುಂದುತ್ತಾ ಹೋಗಿವೆಯೆಂದು ನನಗೆ ಭಾಸವಾಗುತ್ತಿದೆ. ಹಿಂದೆ ನಾವು ಮೂಲಭೂತವಾದ ಪ್ರಶ್ನೆಗಳಲ್ಲಿ ಆಸಕ್ತಿಯನ್ನಿಟ್ಟುಕೊ

ಕ್ಕುತ್ತಿದ್ದೆವು. ಅಲ್ಲದೆ ಯೋಜನೆಗಳನ್ನು ಕಾರ್ಯರೂಪದಲ್ಲಿ ತರಲು ಮನಃಪೂರ್ವಕವಾಗಿ ಪ್ರಯತ್ನಿಸುತ್ತಿದ್ದೆವು. ಇಂದು ಕೆಲಸದ ಸ್ಥಾನವನ್ನು ಊಟ ಮತ್ತು ದಿನದ ಭತ್ತೆ (ಟಿ. ಎ. ಮತ್ತು ಡಿ. ಎ.) ಆಕ್ರಮಿಸಿಕೊಂಡಿವೆ. ಸಭೆ ಸೇರಿ ಗೊತ್ತುವಳಿಗಳನ್ನು ಪಾಸುಮಾಡುವುದೊಂದೇ ತನ್ನ ಕೆಲಸವೆಂದು ಪರಿಷತ್ತು ಭಾವಿಸಿದಂತಿದೆ. ಅವುಗಳ ಭವಿತವ್ಯವೇನು ಎಂಬುದರ ಚಿಂತೆ ಯಾರಿಗೂ ಇರುವದಿಲ್ಲ. ಆ ಕಾಲದಲ್ಲಿ ಮಹಿಳೆಯರನ್ನು ಶಕ್ತಿರೂಪಿಣಿ ಎಂದು ಕೆಲವರು ಭಾವಿಸಿದರೆ ಕೆಲವರು ಅಬಲೆಯೆಂದು ಗಣಿಸುತ್ತಿದ್ದರು. ಸನಾತನಿಗಳು ಸುಧಾರಣೆಯನ್ನು ಬಯಸುತ್ತಿದ್ದಿಲ್ಲವೇನೋ ನಿಜ. ಆದರೆ ಅವರು ನಮ್ಮನ್ನು ವಿರೋಧಿಸಲು ಹೆದರುತ್ತಿದ್ದರು. ಯಾಕೆಂದರೆ ಮಹಿಳೆಯರ ಮತಗಳು ತಮ್ಮ ಚುನಾವಣೆಯಲ್ಲಿ ಪ್ರಭಾವ ಬೀರಬಹುದೆಂಬ ಹೆದರಿಕೆಯಿತ್ತು. ೧೯೫೭ರವರೆಗೆ ಮಹಿಳೆಯರ ಈ ಶಕ್ತಿ ಜೀವಂತವಾಗಿತ್ತು. ಇಂದು ಮಹಿಳೆಯರ ಮತದ ಪರಿವೆ ಯಾರಿಗೂ ಇಲ್ಲ. ಕಾರಣ ಮಹಿಳೆಯರು ಸ್ವತಃ ಸಂಘಟಿತವಾಗಿಲ್ಲ. ಅವರದೇ ಆದ ಯಾವ ಸಾಮಾಜಿಕ ಧ್ವನಿಯೂ ಇಲ್ಲ. ತುಂಬಾ ಉದಾಸೀನರಾದಂತೆ ಕಂಡು ಬರುತ್ತಿದೆ. ಇಂದು ಮಹಿಳೆಯರು ತಮ್ಮದೇ ಜಗತ್ತಿನಲ್ಲಿ ನಿಶ್ಚಿಂತರಾಗಿ ಇದ್ದುಬಿಟ್ಟಿದ್ದಾರೆ. ನಮ್ಮ ಕಾಲದಲ್ಲಿ ಬೇರೆ ಬೇರೆ ರಾಜಕೀಯ ಪಕ್ಷಗಳು ಅನೇಕ ಒತ್ತಡಕ್ಕೊಳಗಾಗಿ ಮಹಿಳೆಯರನ್ನು ಮುಂದಕ್ಕೆ ತರಲು ಅವರನ್ನು ಚುನಾವಣೆಗೆ ನಿಲ್ಲಿಸಿ ಆರಿಸಿ ತರಲು ಪ್ರಯತ್ನಿಸುತ್ತಿಸುತ್ತಿದ್ದವು. ೧೯೭೧ರಲ್ಲಿ ಲೋಕಸಭೆಯಲ್ಲಿ ಕೇವಲ ಹದಿಮೂರು ಮಹಿಳೆಯರಿದ್ದರೆಂದ ಮೇಲೆ ಮಹಿಳೆಯರು ಎಷ್ಟೊಂದು ನಿರ್ಲಕ್ಷಿಸಲ್ಪಟ್ಟಿದ್ದಾರೆ ಅವರಲ್ಲಿ ಎಷ್ಟೊಂದು ಅವನತಿಯಾಗಿದೆ ಎಂಬುದರ ಕಲ್ಪನೆ ಸಹಜವಾಗಿ ಬರುತ್ತದೆ. ಬಹುಶಃ ಹನ್ನೊಂದು ವರುಷಗಳ ಕಾಲ ಒಬ್ಬ ಮಹಿಳೆಯನ್ನೇ ಸರ್ವೋಚ್ಚಸ್ಥಾನದಲ್ಲಿ ಕುಳ್ಳಿರಿಸಿ ಎಲ್ಲ ಆಡಳಿತ ಸೂತ್ರಗಳನ್ನು ಅವಳ ಕೈಗೊಪ್ಪಿಸಿ ನಮ್ಮ ಸಮಾಜ ಮಹಿಳೆಯ ಬಗೆಗಿದ್ದ ಹೊಣೆಗಾರಿಕೆಯ ಇತಿಶ್ರೀ ಮಾಡಿ ಗಾಢವಾದ ಯೋಗನಿದ್ರೆಯಲ್ಲಿ ಮುಳುಗಿಬಿಟ್ಟಂತಿದೆ"

○ ○ ○ ○ ○

## ಗೃಹ ಕಾರ್ಮಿಕರ ಹಕ್ಕು ಸಂರಕ್ಷಣಾ ದಿನಾಚರಣೆ

ಅಸಂಘಟಿತ ವರ್ಗದವರು ಅನಿಶ್ಚಿತ ಕೂಲಿ, ಅನಿಶ್ಚಿತ ಅವಧಿಯಲ್ಲಿ ದುಡಿದು ಸಾಮಾಜಿಕ ಭದ್ರತೆಗಳಿಂದ ದೂರವಾಗಿ ಅಭದ್ರತೆಯ ನೆರಳಲ್ಲಿ, ನಿರಂತರ ಶೋಷಣೆಯ ಅಡಿಯಲ್ಲಿ ಮೂಕ ಬಲಿ ಪಶುಗಳಾಗಿದ್ದಾರೆ. ಸಮಸ್ಯೆಗಳ, ಸಂಕಷ್ಟಗಳ ಸಂಕೋಲೆಗಳಿಂದ ಬಂಧಿತರಾಗಿ ನಿರಂತರವಾಗಿ ಬಳಲುತ್ತಿರುವ ಈ ಅಸಂಘಟಿತರಲ್ಲಿ ಗೃಹ ಕಾರ್ಮಿಕರೂ ಗಣನೀಯ ಸಂಖ್ಯೆಯಲ್ಲಿದ್ದಾರೆ. ಮಹಿಳೆಯರು, ಮಕ್ಕಳೇ ಅಧಿಕವಾಗಿರುವ ಗೃಹ ಕಾರ್ಮಿಕರು ನಗರದ ಶ್ರೀಮಂತರ, ಮಧ್ಯಮ ವರ್ಗದವರ ಅನಿವಾರ್ಯತೆ ನೀಗಿಸಿ, ಅವರ ಕೆಲಸದ ಭಾರ ಹೊತ್ತರೂ, ಮಾಲಿಕರ ಅನುಕಂಪಕ್ಕೆ ಎರವಾಗಿದ್ದಾರೆ. ಅಷ್ಟೇ ಅಲ್ಲದೆ, ಅನವಶ್ಯಕ ಆರೋಪ, ತಾತ್ಸಾರ, ಮುಂಗೋಪ, ಅತ್ಯಾಚಾರಗಳಂತಹ ದೌರ್ಜನ್ಯಗಳಿಗೆ ಬಲಿಯಾಗುತ್ತಿದ್ದಾರೆ. ಇವುಗಳನ್ನು ಗಮನದಲ್ಲಿರಿಸಿಕೊಂಡು, "ಬೆಂಗಳೂರು ಗೃಹ ಕಾರ್ಮಿಕ ಸಂಘ" ವು ಗೃಹ ಕಾರ್ಮಿಕರ ಬಗೆಗಿನ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ, ಅವರ ನಿಜ ವ್ಯಕ್ತಿತ್ವವನ್ನು ಪರಿಚಯಿಸುವುದರ ಜೊತೆಗೆ ಅವರ ಸಮಸ್ಯೆಗಳನ್ನು ಎತ್ತಿಹಿಡಿಯುವ ಉದ್ದೇಶದಿಂದ ಫೆಬ್ರುವರಿ 26ರಂದು ಕಾರ್ಮಿಕರ ಹಕ್ಕು ಸಂರಕ್ಷಣಾ ದಿನಾಚರಣೆಯನ್ನು ನಿಯೋಜಿಸಿತ್ತು. ಗೃಹ ಕಾರ್ಮಿಕರ ಹಿತರಕ್ಷಣೆಗಾಗಿ ಕಾರ್ಮಿಕ ಸ್ಥಾನಮಾನ, ಸವಲತ್ತು, ಸೌಲಭ್ಯ, ಸಂರಕ್ಷಣೆ, ಸಾಮಾಜಿಕ ಭದ್ರತೆ... ಇತ್ಯಾದಿ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಮೆರವಣಿಗೆ, ಸಾರ್ವಜನಿಕ ಸಭೆಗಳನ್ನು ನಡೆಸಿತು.

# ಬೀದರ್‌ನ "ಮಹಿಳಾ ಮಾಹಿತಿ ಮೇಳ"

—ಒಂದು ಅನಿಸಿಕೆ

ಫೆಬ್ರವರಿ 1, 2, 3ರಂದು ಬೀದರ್‌ನಲ್ಲಿ "ಮಹಿಳಾ ಸಮಾಖ್ಯಾ" ದವರು ಒಂದು "ಮಹಿಳಾ ಮಾಹಿತಿ ಮೇಳ" ಏರ್ಪಡಿಸಿದ್ದರು. ಮೊದಲ ಬಾರಿಗೆ ಮಹಿಳಾ ಮೇಳವೊಂದರಲ್ಲಿ ಭಾಗಿಯಾದ "ಮಾನಸ" ದ ಪುಟ್ಟ ಗೆಳತಿ ನಜಹತ್ ಷಾಹೀನರ ಅನಿಸಿಕೆಯನ್ನು ಅವರ ಮಾತಿನಲ್ಲಿಯೇ ಕೊಡಲಾಗಿದೆ.

ನನಗೆ ಬುದ್ಧಿ ಬಂದಾಗಿನಿಂದ ಇದೇ ಮೊದಲ ಬಾರಿ ಇಷ್ಟು ದೂರ ಪ್ರಯಾಣ ಮಾಡಿದ್ದು ಹಾಗೂ ಇಂಥ ಸಮ್ಮೇಳನವನ್ನು ನೋಡಿದ್ದು. ನಾನು ನಮ್ಮೂರಿನಿಂದ ೨ ಗಂಟೆಗೆ ಹೊರಟು ಸಿಟಿನಲ್ಲಿದ್ದೆ. ಅಲ್ಲಿಂದ ೫ ಗಂಟೆಗೆ ನಾನೂ ಮತ್ತು ಸರಸ್ವತಿ ಬೀದರ್‌ಗೆ ಹೋಗುವ ಬಸ್ಸಿನಲ್ಲಿ ಕುಳಿತೆವು. ಇಲ್ಲಿಂದ ಸಾಯಂಕಾಲ ೫ ಗಂಟೆಗೆ ಹೊರಟು ಅಲ್ಲಿಗೆ ಮಾರನೆಯ ದಿನ ಬೆಳಿಗ್ಗೆ ೯.೩೦ — ೧೦ಗಂಟೆಗೆ ತಲುಪಿದೆವು. ಅಲ್ಲಿಗೆ ಹೋಗಿ ಸ್ನಾನ–ತಿಂಡಿ ಮುಗಿಸಿ ಅಲ್ಲಿರುವ "ಮಾರಕುಂದ" ಎಂಬ ಸಣ್ಣ ಹಳ್ಳಿಗೆ ಹೋದೆವು. ಅಲ್ಲಿ ಹೋಗಿ ಎಲ್ಲಾ ಜನರ ಪರಿಚಯ ಮಾಡಿಕೊಂಡೆವು. ಅಲ್ಲಿ ಅನೇಕ ಸಣ್ಣ ಸಣ್ಣ ಟೆಂಟ್‌ಗಳನ್ನು ಮಾಡಿದ್ದರು. ಅಲ್ಲಿ ನಾವು ಮೊದಲನೇ ಟೆಂಟ್‌ಗೆ ಹೋದೆವು. ಅಲ್ಲಿ "ಘಟಶ್ರಾದ್ಧ" ಸಿನಿಮಾ ನೋಡಿದೆವು. ನಂತರ ಊಟದ ಸಮಯವಾಯಿತೆಂದು ಊಟಕ್ಕೆ ಹೊರಟು, ಊಟ ಮುಗಿಸಿ ಮತ್ತೇ ಸಿನಿಮಾ ನೋಡುವ ಕಡೆ ಹೋಗಿ ಕುಳಿತೆವು. ಅಲ್ಲಿ ಮೊದಲನೇ ಟೆಂಟಿನಲ್ಲಿ ನಾವು ಸಿನಿಮಾ ಮಾತ್ರ ನೋಡಿದೆವು. ಅಲ್ಲಿಂದ ಎರಡನೇ ಟೆಂಟಿಗೆ ಹೋದೆವು. ಅಲ್ಲಿ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಹಾಗೂ ಅಲ್ಲಿಯ ಮಹಿಳೆಯರ ಏಳಿಗೆಯ ಬಗ್ಗೆ ಬಹಳ ಚರ್ಚೆ ನಡೆಯಿತು. ಹಾಗೆ ಅಲ್ಲಿಯ ಜನರ ನಡವಳಿಕೆ ಮತ್ತು ಅವರ ನಾಗರೀಕತೆಯ ಬಗ್ಗೆ ವಾದ ನಡೆಯಿತು. ಹಾಗೆ ಅಲ್ಲಿಯ ಜನರು ವಿದ್ಯೆಯೆಂದರೇನು ಎಂದು ತಿಳಿಯದವರು.

"ನಮ್ಮ ಮನೆಯಲ್ಲಿ ನಮ್ಮ ಗಂಡ ಹಾಗೂ ಮಕ್ಕಳು ಮತ್ತು ನಾವು ಎಲ್ಲರೂ ದುಡಿದರೂ ಬಡತನ ಎನ್ನುವುದು ಇದ್ದೇ ಇದೆ. ನಾವು ಕೂಲಿಗೆ ಹೋಗುತ್ತೇವೆ, ನಮ್ಮ ಗಂಡಸರೂ ಕೂಲಿ ಮಾಡುತ್ತಾರೆ. ಹಾಗೂ ನಮ ಮಕ್ಕಳೂ ಕೂಲಿ ಮಾಡುತ್ತಾರೆ. ಹಾಗಿದ್ದರೂ ಸಹ ನಮಗೆ ಒಂದು ಹೊತ್ತು ಊಟ ಸಿಕ್ಕರೆ ಇನ್ನೊಂದು ಹೊತ್ತು ಉಪವಾಸವಿರಬೇಕಾಗುತ್ತದೆ" ಇದು ಅಲ್ಲಿಯ ಹೆಂಗಸರೆಲ್ಲರ ಹೇಳಿಕೆ. ಅಲ್ಲಿಯ ಒಬ್ಬ ಮಹಿಳೆ ಎದ್ದು ಹೀಗೆಂದು ಹೇಳಿದಳು: "ನನ್ನ ಸಮಸ್ಯೆ ಹೀಗಿದೆ. ನಾನು ಬೆಳಿಗ್ಗೆ ಹೊಲದಲ್ಲಿ ಕಸ ತೆಗೆಯಲು ಹೋಗುತ್ತೇನೆ. ನಾನು ಅಲ್ಲಿಂದ ಬರಬೇಕಾದರೆ ರಾತ್ರಿ ೧೦ಗಂಟೆಯ ಸಮಯವಾಗಿರುತ್ತೆ. ನಾನು ಅಲ್ಲಿಂದ ಬರುವಾಗ ತರುವ ದುಡ್ಡು ಎಷ್ಟೆಂದರೆ ೫ ರೂಪಾಯಿ. ಹಾಗೆ ನನ್ನ ಗಂಡನು ಕೂಲಿ ಮಾಡಿ ೧೦ ರೂಪಾಯಿ ತರುತ್ತಾನೆ. ನನಗೆ ೨ ಮಕ್ಕಳು, ನನ್ನ ಎರಡೂ ಮಕ್ಕಳಿಗೂ ಶಾಲೆಗೆ ಕಳಿಸಲಾಗದೆ ಆ ಮಕ್ಕಳನ್ನೂ ಸಹ ಕೂಲಿಗೆ ಕಳಿಸುತ್ತೇನೆ. ನಾನು ಕೆಲಸದಿಂದ ಬಂದ ನಂತರ ಮನೆಯಲ್ಲಿರುವುದನ್ನೇ ನೋಡಿ "ರೋಟಿ" ಮಾಡಿ ಇಡುತ್ತೇನೆ. ನಾವೆಲ್ಲರೂ ಅದನ್ನು ಒಂದೊಂದು ತಿಂದು ಹೊಟ್ಟೆ ತುಂಬ ನೀರು ಕುಡಿದು ಮಲಗುತ್ತೇವೆ. ಮತ್ತೆ ಮಾರನೇ ದಿನ ಮಾಮೂಲಿ ಕೆಲಸಕ್ಕೆ ಹೋಗುವುದು" ಎಂದು ತನ್ನ ಮನೆಯ ಬಗ್ಗೆ ಹೇಳಿದಳು. ನಂತರ ಅಲ್ಲಿಂದ ನಾವು ಮೂರನೆ ಟೆಂಟಿಗೆ ಹೋದೆವು. ಅಲ್ಲಿ ಬಾಲ್ಯವಿವಾಹ, ದೇವದಾಸಿ ಪದ್ಧತಿ, ವೇಶ್ಯಾವೃತ್ತಿ, ಮಾಡುವುದು ನಿಮಗೆ ಸರಿ ಎನಿಸುತ್ತದೆಯೇ? ಎಂದು ಅವರಿಗೆ ಪ್ರಶ್ನೆ ಹಾಕಿದಾಗ ಅವರ ಉತ್ತರ ಹೀಗಿತ್ತು: ವೇಶ್ಯಾವೃತ್ತಿ ಮಾಡುವುದು ತಪ್ಪಲ್ಲ, ಏಕೆಂದರೆ ಹೆಣ್ಣು ಹೊಟ್ಟೆಪಾಡಿಗೆ ಯಾವುದಾದರೂ ಒಂದು ಕೆಲಸ ಮಾಡಲೇಬೇಕಾಗುತ್ತದೆ. ಅದೇ ಆಕೆ ಬೇರೆ ಉದ್ಯೋಗದಲ್ಲಿದ್ದೂ ಸಹ ವೇಶ್ಯಾವೃತ್ತಿ ಮಾಡುತ್ತಿದ್ದರೆ ಅದು ತಪ್ಪು ಎಂದೆನಿಸುತ್ತದೆ–ಎಂದು ಒಬ್ಬ ಮಹಿಳೆ ಹೇಳಿದಳು. ಹೆಣ್ಣು ದೇವದಾಸಿ ಪದ್ಧತಿಯಿಂದ ವೇಶ್ಯಾ

ವೃತ್ತಿಯಲ್ಲಿ ತೊಡಗುತ್ತಾಳೆ. ಆದ್ದರಿಂದ ಮೊದಲು ದೇವದಾಸಿ ಪದ್ಧತಿಯನ್ನು ನಿಲ್ಲಿಸಬೇಕು. ನಮ್ಮಲ್ಲಿ ದೇವದಾಸಿ ಪದ್ಧತಿ ಇನ್ನೂ ನಡೆಯುತ್ತಿದೆ, ಹಾಗೇ ವೇಶ್ಯಾವೃತ್ತಿಯು ಸಹಾ ಇಂದಿಗೂ ಜಾರಿಯಲ್ಲಿದೆ ಎಂದು ಎಲ್ಲರೂ ಹೇಳಿದರು.

ಬೆಂಗಳೂರಿನಿಂದ ಬಂದಿದ್ದ ಮಹಿಳೆಯರು ಅವರಿಗೆಲ್ಲಾ ಹೀಗೆಂದು ಹೇಳಿದರು: ಈಗ ನಿಮ್ಮಲ್ಲಿ ಮಕ್ಕಳನ್ನು ದೇವದಾಸಿ ಪದ್ಧತಿಗೆ ಬಿಟ್ಟರೆ ೩ ವರ್ಷ ಶಿಕ್ಷೆಯಾಗುತ್ತದೆ, ಮತ್ತು ೩೦೦೦ರೂಪಾಯಿ ದಂಡ ಕಟ್ಟಬೇಕಾಗುತ್ತದೆ. ಆದ್ದರಿಂದ ನಿಮ್ಮಲ್ಲಿ ಈ ದೇವದಾಸಿ ಪದ್ಧತಿಯನ್ನು ಮೊದಲು ನಿಲ್ಲಿಸಬೇಕು—ಎಂದರು, ವೇಶ್ಯಾವೃತ್ತಿಯಲ್ಲಿ ಹೆಣ್ಣು ವ್ಯಾಪಾರಿ ಜೀವನ ಮಾಡಿದರೆ ಆಕೆಗೆ ವೇಶ್ಯೆ ಎಂದು ಪ್ರಪಂಚ ಕರೆಯುತ್ತದೆ, ಅದೇ ಆ ಹೆಣ್ಣಿನ ಮೈಯಿಂದ ಆನಂದ ಪಡುವ ಗಂಡಸಿಗೆ ಈ ಪ್ರಪಂಚ ವೇಶ್ಯ ಅಥವ ಬೇರೆ ಯಾವ ಹೆಸರಿನಿಂದಲೂ ಕರೆಯುವುದಿಲ್ಲ ಏಕೆ? ಹೆಣ್ಣು ಮಾಡಿದರೆ ಮಾತ್ರ ತಪ್ಪೆನಿಸುತ್ತದೆ, ಅದೇ ಗಂಡು ತಪ್ಪು ಮಾಡಿದರೆ ಅದು ತಪ್ಪು ಎನ್ನಿಸುವುದಿಲ್ಲವಲ್ಲ ಏಕೆ? ಇಲ್ಲಿ ಹೆಣ್ಣಿಗೊಂದು ನ್ಯಾಯ ಗಂಡಿಗೊಂದು ನ್ಯಾಯ ಏಕೆ? ಎಂಬ ಪ್ರಶ್ನೆಗಳು ಮೂಡಿ ಬಂದವು. ಆ ಹಳ್ಳಿಯ ಜನರಲ್ಲಿ ಒಂದು ನಂಬಿಕೆ ಇದೆ. ಅಲ್ಲಿ ವರ್ಷಕ್ಕೆ ಒಂದು ಬಾರಿ ಎಲ್ಲಮ್ಮನ ಜಾತ್ರೆ ಎಂಬುದು ನಡೆಯುತ್ತದೆ. ಅಲ್ಲಿ ವರ್ಷಕ್ಕೆ ಒಬ್ಬರು ತಮ್ಮ ಹೆಣ್ಣು ಮಕ್ಕಳನ್ನು ದೇವದಾಸಿಯರನ್ನಾಗಿ ಮಾಡಿ ಅಲ್ಲಿ ಬಿಡಬೇಕು ಎಂಬುದು ನಂಬಿಕೆ, ಅಲ್ಲಿಯ ಹೆಂಗಸರಿಗೆ ಪ್ರಶ್ನೆಗಳನ್ನು ಹಾಕಿದಾಗ ಅವರು ಈ ರೀತಿಯಲ್ಲಿ ಉತ್ತರ ಕೊಟ್ಟರು.

೧) ಎಲ್ಲಮ್ಮನ ಜಾತ್ರೆಗೆಂದು ಹೆಣ್ಣು ಮಕ್ಕಳನ್ನು ಕರೆದುಕೊಂಡು ಹೋಗುವವರಿಗೆ ಶಿಕ್ಷೆ ಕೊಡಬೇಕೆ ಅಥವಾ ಅಲ್ಲಿ ಹೋಗಿರೊ ಹೆಣ್ಣು ಮಕ್ಕಳಿಗೆ ಶಿಕ್ಷೆ ಕೊಡಬೇಕೆ? ಎಂಬ ಪ್ರಶ್ನೆಗೆ—

ಆ ಎಲ್ಲಮ್ಮನ ಜಾತ್ರೆಗೆಂದು ಕರೆದುಕೊಂಡು ಹೋಗಿರುವವರಿಗೆ ಮೊದಲು ಶಿಕ್ಷೆ ಕೊಡಬೇಕು, ಅವರೇ ಬಲವಂತದಿಂದ ತಮ್ಮ ಹೆಣ್ಣು ಮಕ್ಕಳನ್ನು ದೇವದಾಸಿ ಪದ್ಧತಿಗೆ ಬಿಡುವುದು — ಎಂಬುದು ಆ ಹೆಂಗಸರ ಉತ್ತರವಾಗಿತ್ತು,

೨) ದೇವದಾಸಿಯರಿಗೆ ತಾವು ಎಲ್ಲರಿಗಿಂತ ಬೇರೆ ಅನ್ನಿಸುತ್ತದೆಯೇ ಇಲ್ಲವೇ?

ಅವರಿಗೆಲ್ಲಾ ತಾವು ಬೇರೆ ಎಲ್ಲರಂತೆ ಅಲ್ಲ ಎಂದು ಖಂಡಿತ ಅನ್ನಿಸುತ್ತದೆ ಎಂದು ಅಲ್ಲಿ ದೇವದಾಸಿಯೇ ಆಗಿದ್ದ ಮಹಿಳೆಯೊಬ್ಬಳು ಹೇಳಿದಳು,

ಮೇಲ್‌ಜಾತಿಯವರಿಗೆ ಎಲ್ಲಮ್ಮ ದೇವತೆ ಇಲ್ಲ, ಅವರು ಎಲ್ಲಮ್ಮನಿಗೆ ಮುತ್ತು ಕಟ್ಟುವುದಿಲ್ಲ. ಕೆಳಜಾತಿಯವರಿಗೆ ಇದೆಲ್ಲಾ ಇದೆ ಎಂದು ಅಲ್ಲಿಯ ಜನ ಹೇಳುತ್ತಾರೆ. ಅಲ್ಲಿ ದೇವದಾಸಿಯಾಗಿದ್ದ ಒಬ್ಬ ಮಹಿಳೆ ತನ್ನ ಜೀವನದ ಬಗ್ಗೆ ಹೇಳಿದಳು, ಆಕೆಯ ಮಕ್ಕಳು ಆ ಊರಿನ ಗೌಡರ ಮನೆಯ ಆಳುಗಳು. ಆ ಮಕ್ಕಳು ಯಾವುದಾದರೂ ಕೆಲಸವನ್ನು ತಪ್ಪಾಗಿ ಮಾಡಿದರೆ ಅಥವಾ ಸರಿಯಾಗಿ ಮಾಡದೇ ಹೋದರೆ ಆ ಗೌಡ ಬಾಯಿಗೆ ಬಂದಂತೆ ಬೈಯ್ದು "ನಿನ್ನನ್ನು ಸುಟ್ಟುಬಿಡುತ್ತೇನೆ, ತುಳಿದು ಬಿಡುತ್ತೇನೆ" ಎಂದೆಲ್ಲ ಹೇಳುತ್ತಾನೆ. "ನಾನು ದೇವದಾಸಿಯಾಗಿರುವುದರಿಂದ ಏನನ್ನು ಹೇಳಲು ಆಗದೆ ಬಾಯಿ ಮುಚ್ಚಿಕೊಂಡು ಬಿದ್ದಿರುತ್ತೇನೆ" ಎನ್ನುತ್ತಾಳೆ. ಎಲ್ಲಾ ಹೆಂಗಸರಂತೆ ತನ್ನನ್ನು ನೋಡುವುದಿಲ್ಲ, ತನ್ನನ್ನು ಒಂದು ರೀತಿ ಮನುಷ್ಯಳಲ್ಲವೆಂದೇ ನೋಡುತ್ತಾರೆ. ಹೇಗಾದರೂ ನೋಡಲಿ, ಏನಾದರೂ ಅಂದುಕೊಳ್ಳಲಿ, ತನ್ನ ಮಕ್ಕಳಿಗೆ ಏನೂ ಮಾಡದೆ ಅವರನ್ನು ಚೆನ್ನಾಗಿ ಒಳ್ಳೆಯ ಭಾವನೆಯಿಂದ ನೋಡಿದರೆ ಸಾಕು ಎಂದೆನಿಸುತ್ತದೆ ಎಂದು ಆಕೆ ತನ್ನ ಜೀವನದ ಕೆಲವು ಘಟನೆಗಳನ್ನು ಹೇಳಿದಳು.

೩) ದೇವದಾಸಿಯರ ಮನೆ ನಿಮ್ಮ ಊರಲ್ಲಿದೆ ಎಂದರೆ ನಿಮಗೆ ಅವಮಾನವೇ? ಏಕೆ?

"ದೇವದಾಸಿಯರ ಮನೆ ಊರಲ್ಲಿದೆ ಎಂದರೆ ಆ ಊರಿನಲ್ಲಿರುವ ಎಲ್ಲರಿಗೂ ಅವಮಾನ. ಆದ್ದರಿಂದ ಆಕೆಯನ್ನು ಊರಿನ ಹೊರಗಡೆಯೇ ಇಡಬೇಕು, ಏಕೆಂದರೆ ಅವಳು ಮಾಡಬಾರದ ಕೆಲಸ ಮಾಡುತ್ತಿರುತ್ತಾಳೆ, ಆದ್ದರಿಂದ ನಮಗೆಲ್ಲ ಅವಮಾನ, ಆದ್ದರಿಂದ ಅವಳು ಊರಿಂದ ಹೊರಗಡೆಯೇ ಇರಬೇಕು ಎಂದು ಊರಿನ ಒಳಗೆ ಮನೆ ಮಾಡಲು ಅವಕಾಶ ಕೊಡುವುದಿಲ್ಲ" ಎಂದು ಅವರು ಹೇಳಿದರು.

೪) ಬಡತನಕ್ಕಾಗಿ ಹೆಂಗಸರು ದೇವದಾಸಿಯರಾಗುತ್ತಾರೆಯೆ?

ಹೌದು, ಶ್ರೀಮಂತರಾಗುವ ಆಸೆಯಿಂದ ಹೆಂಗಸರು ದೇವದಾಸಿಯರಾಗುತ್ತಾರೆ.

ಹಾಗೆಯೇ ಮಹಾರಾಷ್ಟ್ರದಲ್ಲಿ ದೇವದಾಸಿ ಪದ್ಧತಿ ಇಂದಿಗೂ ಜಾರಿಯಲ್ಲಿದೆ. ಅವರಲ್ಲಿ ಬೇರೆ ರೀತಿಯಲ್ಲಿ ಈ ಪದ್ಧತಿ ನಡೆಯುತ್ತದೆ. ಅವರಲ್ಲಿ ಒಂದು ನಂಬಿಕೆ ಇದೆ. ಹೆಣ್ಣು ಮಕ್ಕಳಿಗೆ ಮದುವೆಯಾಗಿ ಮಕ್ಕಳಾಗದೆ ಹೋದರೆ ಅವರು ದೇವರಲ್ಲಿ ಹರಕೆ ಮಾಡಿಕೊಳ್ಳುತ್ತಾರೆ. ಅದೇನೆಂದರೆ ಮೊದಲು ಗಂಡುಮಗುವಾದರೆ ಅವನನ್ನು ಪೂಜಾರಿಯಾಗಿ ಮಾಡುತ್ತೇವೆ, ಹೆಣ್ಣಾದರೆ ದೇವದಾಸಿಯಾಗಿ ಮಾಡುತ್ತೇವೆ ಎಂದು. ಇದೂ ಸಹ ಮಾಡುವುದು ತಪ್ಪು. ಈ ರೀತಿಯಲ್ಲೂ ಸಹ ಮಾಡಬಾರದು. ಅಂದರೆ ಹೆಣ್ಣಿಗೆ ದೇವದಾಸಿಯನ್ನಾಗಿ ಮಾಡಲೇಬಾರದು.

ಹಾಗೆಯೇ ನಾವು ಅಲ್ಲಿಂದ ಟೆಂಟ್ ನಂ.೪ಕ್ಕೆ ಬಂದೆವು. ಅಲ್ಲಿ ಕಾನೂನಿನ ಬಗ್ಗೆ ವಾದ ವಿವಾದಗಳು ನಡೆಯುತ್ತಿದ್ದವು. ಗಂಡು ೨ನೇ ಮದುವೆಯಾದರೆ ತಪ್ಪೆ? ಎಂಬ ಪ್ರಶ್ನೆಗೆ — ಗಂಡು ೨ನೇ ಮದುವೆಯಾದರೆ ತಪ್ಪು ಎಂಬ ಉತ್ತರ ಬಂತು. ಮೊದಲನೆ ಹೆಂಡತಿ ಸತ್ತು ಅವನು ಎರಡನೇ ಮದುವೆಯಾದರೆ ಅಥವಾ ಮೊದಲನೇ ಹೆಂಡತಿಗೆ ಮಕ್ಕಳಾಗದೆ ಅವನು ೨ನೇ ಮದುವೆಯಾದರೆ ಅದು ತಪ್ಪು ಎನಿಸುವುದಿಲ್ಲ. ಮೊದಲನೆ ಹೆಂಡತಿ ಇದ್ದೂ, ಮಕ್ಕಳಿದ್ದೂ ಸಹ ೨ನೆ ಮದುವೆಯಾದರೆ ಅವನು ಗಂಡನಲ್ಲ, ರಾಕ್ಷಸ ಎಂದು ಹೇಳಿದರೂ ತಪ್ಪಾಗುವುದಿಲ್ಲ ಎಂದು ಅಲ್ಲಿಯ ಹೆಂಗಸರೆಲ್ಲ ಹೇಳುತ್ತಾರೆ.

ಅಲ್ಲಿ ಒಬ್ಬ ಮಹಿಳೆ ತನ್ನ ಹಳ್ಳಿಯ ಒಂದು ಕಥೆಯನ್ನು ಹೇಳಿದಳು. ಮೊದಲನೇ ಹೆಂಡತಿಗೆ ಮಕ್ಕಳಾಗದೆ ಅವನು ೨ನೇ ಮದುವೆಯಾದ. ಎರಡನೇ ಹೆಂಡತಿಗೆ ಒಂದು ಮಗು ಆಯಿತು. ನಂತರ ಮೊದಲನೆ ಹೆಂಡತಿಗೂ ಮಗುವಾಯಿತು. ಹೀಗೆಯೇ ಮೊದಲನೇ ಹೆಂಡತಿಗೆ ೬ ಜನ ಮಕ್ಕಳಾದರು. ಆ ಗಂಡನಾದವನು ತನ್ನ ಮೊದಲನೇ ಹೆಂಡತಿಗಿಂತ ಎರಡನೇ ಹೆಂಡತಿಯನ್ನು ಬಹಳ ಪ್ರೀತಿಸಿದ್ದನು. ಅವನು ಮೊದಲನೇ ಹೆಂಡತಿಗೆ ಬಹಳ ಕಿರುಕುಳ ಕೊಡುತ್ತಿದ್ದ. ಅವಳಿಗೆ ದಿನಾಲೂ ಒಂದೊಂದು ಮಾತಿಗೂ ಹೊಡೆಯುತ್ತಿದ್ದ. ಅವನು ಹಾಗೆ ಹೊಡೆಯುತ್ತಿದ್ದದ್ದನ್ನು ನೋಡಿ ಊರ ಜನರು ಸಹಿಸಲಾರದೆ ಎಲ್ಲಾ ಜನ ಸೇರಿ ಅವನನ್ನು ಹೊಡೆದರು. ಅವನು ಪೊಲೀಸ್ ಸ್ಟೇಷನ್‌ಗೆ ಹೋಗಿ ಸುಳ್ಳು–ಸುಳ್ಳು ಮಾತುಗಳನ್ನಾಡಿದ. "ನನ್ನ ಹೆಂಡತಿಗೆ ಇಷ್ಟೆಲ್ಲ ಗಂಡಂದಿರಿದ್ದಾರೆ, ಇವಳಿಗೆ ಇವರೆಲ್ಲರ ಜೊತೆ ಸಂಬಂಧವಿದೆ" ಎಂದು ಹೇಳಿ ಆಕೆಯನ್ನು ಪೊಲೀಸ್ ಸ್ಟೇಷನ್‌ನಲ್ಲಿ ಇಟ್ಟಿರುವಂತೆ ಮಾಡಿದ್ದ. ಆಕೆ ಜೈಲಿನಲ್ಲಿ ತನ್ನ ಗಂಡನನ್ನು ನನೆದು ನೆನೆದು ಅಳುತ್ತಿದ್ದಳು ಎಂದು ಆ ಮಹಿಳೆ ಹೇಳಿದಳು. ಸರಿ ೨ಯವಳು ಹೆಣ್ಣೇ ಅಲ್ವ? ಅವಳು ತನ್ನ ಗಂಡನಿಗೆ ಹೇಳಿ ಅವಳನ್ನೂ ಸಹ ಮನೆಯಲ್ಲಿ ಇರಿಸಬಹುದಾಗಿತ್ತು ಅಲ್ವ? ಎಂದು ಕೇಳಿದರೆ, ಅವರೆಲ್ಲಾ ಅವಳಿಗೆ ಇನ್ನೊಬ್ಬಳ ಜೊತೆ ಇರುವುದು ಅವಮಾನ ಎನಿಸುತ್ತಿತ್ತು. ಆದ್ದರಿಂದ ಅವಳು ತನ್ನ ಗಂಡನಿಗೆ ಏನೂ ಹೇಳದೆ ಸುಮ್ಮನಿರುತ್ತಿದ್ದಳು. ತನ್ನ ಗಂಡನಿಂದ ತನಗೆ ಮಾತ್ರ ಸುಖ ಬರಬಾರದು ಎಂದು ಅವಳಿಗೆ ಬಹಳ ಹೊಟ್ಟೆಕಿಚ್ಚು ಇತ್ತು ಎಂದು ಹೇಳಿದರು.

ಹೀಗೆ ಬೀದರ್‌ನ ಮರಕುಂದ ನಗರದಲ್ಲಿ ಸಮ್ಮೇಳನ ನಡೆಯಿತು. ನನಗೆ ಈ ಸಮ್ಮೇಳದಿಂದ ಬಹಳ ಸಂತೋಷವಾಯಿತು. ಈ ಸಮಾಜದಲ್ಲಿ ಹೆಂಗಸರಿಗೆ ಎಷ್ಟು ಕೀಳಾಗಿ ನೋಡುತ್ತಾರೆ ಮತ್ತು ಅವರಿಗೆ ಮಾಡಬಾರದನ್ನ ಮಾಡಿ ಬಿಟ್ಟು ಬಿಡುತ್ತಾರೆ. ಉದಾ: ದೇವದಾಸಿಯರನ್ನಾಗಿ ಮಾಡುವುದು. ಬಾಲ್ಯವಿವಾಹ ಇಂತಹದನ್ನೆಲ್ಲ ಮಾಡುತ್ತಾರೆ. ಮತ್ತು ಆಕೆ ಕೆಟ್ಟವಳು, ಕೆಟ್ಟವಳು ಎಂದು ಸಮಾಜ ಬೈಯುವ ಹಾಗೆ ಮಾಡುತ್ತಾರೆ. ನನಗನಿಸಿದ ಹಾಗೆ, ಹೀಗೆ ಅನೇಕ ಸಮ್ಮೇಳನಗಳನ್ನು ನಡೆಸಿದರೆ ಹಿಂದುಳಿದ ಮಹಿಳೆಯರು ಅಂದರೆ ನಾಗರೀಕತೆ ಬಗ್ಗೆ ಸ್ವಲ್ಪವೂ ಜ್ಞಾನವಿಲ್ಲದ ಮಹಿಳೆಯರು ಚೆನ್ನಾಗಿ ಮುಂದುವರಿಯಬಹುದು ಎಂದು ನನಗನಿಸುತ್ತದೆ. ನನಗೆ ಈ ಸಮ್ಮೇಳನ ಬಹಳ ಮೆಚ್ಚಿಗೆಯಾಗಿದೆ, ಇಂತಹ ಸಮ್ಮೇಳನಗಳು ಎಲ್ಲಾದರೂ ಮುಂದೆ ನಡೆದರೆ ಅಲ್ಲಿಗೆ ಹೋಗಬೇಕು ಎಂದು ನನ್ನ ಒಳ ಮನಸ್ಸು ಹೇಳುತ್ತದೆ.

ನಜಹತ್ ಷಾಹೀನ್



# ಸಂವೇದನೆ

## ಬದುಕು ಜಟಕಾ ಬಂಡಿ

೨೫ ಜನವರಿ ೧೯೯೧, ವರ್ಷದ ಪ್ರಾರಂಭ ತಾಯಿಯ ಸಾವಿನಿಂದ ಆರಂಭ, ನಮ್ಮ ಕ್ರಿಯೆಗಳಿಗೆ, ಸಂತೋಷಗಳಿಗೆ ಅರ್ಥ ಹಚ್ಚಿ ಮೆರಗು, ಬೆರಗು ಸಂಭ್ರಮಪಡುತ್ತಿದ್ದ ತಾಯಿ ನಮ್ಮ ಮಧ್ಯ ಇಲ್ಲ. ನಡೆದಾಡುವ ರಸ್ತೆಗಳಲ್ಲಿ, ಚಲಿಸುವ ಬಸ್ಸುಗಳಲ್ಲಿ ಕಾಡುವ ಮಗಳ ಮುಖದಲ್ಲಿ, ಒಂಟಿಯಾಗಿ ಕುಳಿತುಕೊಂಡಾಗ ತಬ್ಬಲಿಯಂತೆ ಅನ್ನಿಸಿ ಕಣ್ಣಲ್ಲಿ ನೀರು ಬರುತ್ತದೆ. ಬದುಕಿನ ಒಂದು ಘಟ್ಟ ಮುಗಿದಂತೆ ಅನ್ನಿಸಿ ನನಗೆ ತೀರಾ ವಯಸ್ಸಾಗುತ್ತಿದೆ ಎನ್ನಿಸತೊಡಗಿದೆ. ತಾಯಿ ಹಾಡುತ್ತಿದ್ದ ಹಾಡುಗಳು ಕಿವಿಯಲ್ಲಿ ಗುಯ್‌ಗುಟ್ಟುತ್ತಿವೆ. ನಾಸ್ತಿಕಳಾದ ನನಗೆ ಆಕೆಯು ದೇವರ ಕುರಿತು ಹಾಡಿದ್ದು, ಮದುವೆ ಸಂಭ್ರಮಗಳಿಗಾಗಿ ಹಾಡುತ್ತಿದ್ದ ಹಾಡುಗಳು ಆತ್ಮೀಯವಾಗಿ ಆಕೆಯ ನೆನಪನ್ನು ನನ್ನಲ್ಲಿ ಭದ್ರ ಪಡಿಸುವ ಸಾಧನಗಳಾಗಿವೆ. ಆಕೆ ಧರಿಸುತ್ತಿದ್ದ ಓಲೆಗಳು ಈಗ ಸದಾ ನನಗೆ ಜೊತೆಗಾತಿಯಾಗುತ್ತಿವೆ. ಆಕೆಯ ಹೆಣದ ಮೇಲಿದ್ದ ಸೀರೆ ನನ್ನ ಒಡಲು, ಮಡಿಲುಗಳಲ್ಲಿ ಜೋಪಾನವಾಗಿದೆ. ಕಳೆದು ಹೋದದ್ದನ್ನು ವಸ್ತುಗಳ ಪ್ರತಿಬಿಂಬದಲ್ಲಿ ಪಡೆದುಕೊಳ್ಳುತ್ತಿದ್ದೇನೆಂಬ ಹುಚ್ಚು........ಭ್ರಮೆ.

ಅಲಂಕರಿಸಿದ ಹೆಣ ಕಣ್ಣುಗಳಲ್ಲಿ ಹಸಿರು ಹಸಿರಾಗಿದೆ. ಮಲಗಿಸಿದ ತಣ್ಣನೆಯ ಶವದ ಮೇಲೆ ಮೊನ್ನೆ ಮೊನ್ನೆಯವರೆಗೆ ಕೈ ಹಾಕಿ ತಬ್ಬಿ ಮಲಗಿದ ಹಾಗೆ ಮಲಗಿ ಅತ್ತಿದ್ದೇನೆ. ಆದರೂ ಆಕೆಯನ್ನು ಕಿತ್ತೊಗೆಯಲು ಆಗುತ್ತಿಲ್ಲ. ಅಲ್ಲಿ ಎಲ್ಲೋ ಕಟ್ಟೆಯ ಮೇಲೆ ಕೂತಂತೆ, ಇಲ್ಲಿ ಎಲ್ಲಿಯೋ ಕಂಭಕ್ಕೆ ಒರಗಿ ನಿಂತಂತೆ, ಕಂಬಳಿ ಹೊದೆದು ಕುರ್ಚಿ ಮೇರ ಕಾಲಾಡಿಸುತ್ತಾ ಕೂತಂತೆ, ಹಪ್ಪಳದ ಚೂರು ಅಗೆಯುತ್ತಾ ಕಾಫಿ ಕುಡಿದಂತೆ ಹೀಗೆ ಏನೇನೋ ಭ್ರಮೆಗಳು........ ಹುಚ್ಚು ಭ್ರಮೆಗಳು

೨೬ರ ಜನವರಿ ೧೯೯೧, ಗಣ ರಾಜ್ಯ ದಿನೋತ್ಸವ. ಮಕ್ಕಳ ಜೈ ಕಾರ ಕಿವಿಗೆ ವಿಕಾರ. ಗಂಡು ಗಂಡು-ಹೆಣ್ಣಿನ ಸಮಾನತೆಯ ಬರಹ ಭಾರತದ ಸಂವಿಧಾನದಲ್ಲಿ ಮೂಡಿ ಬಂದ ದಿನ, ತಾಯಿಯ ಬೆತ್ತಲೆ ಮೈಗೆ ಸ್ನಾನ ಮಾಡಿಸಿ "ಆಹಾ ಶುಕ್ರವಾರ ಮುತ್ತೈದೆ ಸಾವು" ಎನ್ನುವ ಮುತ್ತೈದೆಯರು "ನರಳಲಿಲ್ಲ, ಹಾಸಿಗೆ ಹಿಡಿಯಲಿಲ್ಲ, ಪುಣ್ಯದ ಸಾವು" ಎನ್ನುಹವರು, ಮಧ್ಯ ಮಕ್ಕಳ ಮೆರವಣಿಗೆ, ಕೂಗು, ಸಂಭ್ರಮ. ಇಡೀ ಮನೆಯೇ ನನ್ನೆದುರಿಗೆ ಎದ್ದು ನಿಂತಂತೆ. ಕಂಬ ಕಂಬಗಳು ಆಕೆಯ ಹುಚ್ಚು ಪ್ರೀತಿಯನ್ನು ಹೊದೆದು ನಿಂತಂತೆ. ಮುಸಿ ಕಟ್ಟಿದ, ಬದುಕು ಕಟ್ಟಿದ ತಾಯಿ ಛಿದ್ರವಾದಂತೆ. ಅಣ್ಣ ತಮ್ಮಂದಿರ ನಮ್ಮೆಲ್ಲರ ಬೆಸದಿದ್ದ ಹೃದಯ ಒಡೆದು ಚೂರು ಚೂರಾದಂತೆ.

ಬಾಗಿಲ ಹೊಸಿಲುಗಳಿಗೆ, ಬಾಗಿಲುಗಳಿಗೆ ಮಲ್ಲಿಗೆ ತೋರಣ ಕಟ್ಟುತ್ತಿದ್ದ ತಾಯಿ ಇನ್ನಿಲ್ಲ. ಹುಚ್ಚು ಪ್ರೀತಿಯಲಿ ಕೆಟ್ಟ ಕೆಲವು ಮಾತು ಬಯ್ದು ನೀರೆರೆಯುತ್ತಿದ್ದ ತಾಯಿ ಇನ್ನಿಲ್ಲ. ತಿನ್ನು, ತಿನ್ನು, ಎಂದು ಬಲವಂತ ಮಾಡಿ ನಿಂತು ತಿನ್ನಿಸುವ ತಾಯಿ ಇನ್ನಿಲ್ಲ. ಜಾತಿ, ಗೀತೆ ನೋಡದೇ ಮದುವೆಯಾದ ನಾವಿಬ್ಬರು ಹೆಣ್ಣು ಮಕ್ಕಳಿಗೆ ನೆರಳಾದ ತಾಯಿ ಇನ್ನಿಲ್ಲ. ತಾಯಿ ಇಲ್ಲದ ತವರಿಗೆ ಹೋಗುವುದು ಸಹ ಜೀವವಿರದ ಕಲಕಲು ಗೂಡಿಗೆ ಜೀವಂತ ಶವಗಳಂತೆ ಹೋಗುವುದೂ ಮಾತ್ರ ಆಗಿರುತ್ತದೆಯೋ ಏನೋ?

ಈಕೆಯ ಗಂಟು ಒಂದು ದೊಡ್ಡ ಟ್ರಂಕು. ಬೀಗ ಹಾಕಿಟ್ಟು ಆಗೀಗ ತೆಗದು ನೋಡುತ್ತ ಜೋಪಾ

ನವಾಗಿ ಈಕೆ ಕಾಯ್ದದ್ದಾದರೂ ಏನು? ಚಿಕ್ಕ ಹುಡುಗಿಯರಲ್ಲಿ ನಾವು ಧರಿಸುತ್ತಿದ್ದ ಟೆರಿಕಾಟ್ ಬ್ಲೌಸ್ ಹಳೆಯ ಹರಕಲು ಸೀರೆ, ನಮ್ಮ ಹರಕಲು ಅಂಗಿ, ಒಂದಿಷ್ಟು ಲೋಟ, ಒಂದಿಷ್ಟು ತಟ್ಟೆ. ಒಂದು ಮುಂಚೆ ನನ್ನ ಕರೆದು ಆಕೆಯ ತಾಳಿ ಬಿಚ್ಚಿಕೊಂಡು ಬಂಗಾರದ ಸರೆ ನನಗೆ ಕೊಟ್ಟಳು. "ಸತ್ತ ಮೇಲೆ ಇದು ನಿಮಗೇ ಸೇರಬೇಕು. ಸಾಯ್ ಬೇಕಾದರೆ ನೀವಿರೊಲ್ಲ ತಗೋ ಅಂದಳು. ಸಾವಿನ ಮನೆ ಹೊಕ್ಕರೆ ಸಾಕು, ನನಗೆ ಸಾವು ಬರೋಲ್ಲ ಎನ್ನುತ್ತಿದ್ದ ಆಕೆಯ ಮಾತಿಗೆ ನಾವೆಲ್ಲ ನಗುತ್ತಿದ್ದೆವು, ಹಾಸ್ಯ ಮಾಡುತ್ತಿದ್ದೆವು. ತಾಯಿಯಂತಹ ಘಟವಾಳಿ, ಹಟದ ಹೆಣ್ಣು ಸಾವಿನ ಕೈಗೂ ಸುಲಭವಾಗಿ ದಕ್ಕಿದವಲ್ಲ ಎನ್ನಿಸುವಂತಹ ಕ್ಷಣಗಳಲ್ಲೇ ಎಲ್ಲಾ ನಿಮ್ಮಡಿಸುತ್ತಾ, ಇಲ್ಲಿ ತನಗೇನೂ ಸಂಬಂಧವಿಲ್ಲವೆನ್ನುತ್ತಾ ಹೊರಟೇ ಹೋಗಿಬಿಟ್ಟಳು. ಆಡಿರದ ಮಾತುಗಳೆಷ್ಟೋ ಹೊಟ್ಟೆಯಲ್ಲೇ ತಣ್ಣಗಾಗಿವೆ. ಕಾಡುತ್ತಿದ್ದ "ಪ್ರಜ್ಞೆ" ಗಳೆಷ್ಟೋ ಬೆಂದು ಕರಗಲಾಗಿವೆ. ಸಾಯುವ ಘಳಿಗೆಯಲ್ಲಿ ಹೆಸರಿಡಿದು ಕೂಗಿ ಸತ್ತ ತಾಯಿಯ ಧ್ವನಿ ನಾನೂರು ಮೈಲಿ ದಾಟಿ ಬೆಂಗಳೂರಿನ ಅರಗಿನ ಮನೆಯಲ್ಲಿ ಕೂತ ನಮ್ಮ ಹೃದಯ ತಟ್ಟಲಿಲ್ಲ ಎಂಬ ನೋವು ನಮ್ಮ ಉಳಿದಿರುವ ಬದುಕಿಗಂಟಿದ "ಬುತ್ತಿ ಗಂಟು".

ಋಣ ಹರಿದುಕೊಳ್ಳಲೆಂದೇ ಹಳ್ಳಿ ಬಿಟ್ಟಿರದ ತಾಯಿ ಬೆಂಗಳೂರಿನ ಗೂಡು ಮನೆಗಳಲ್ಲಿ ನಮ್ಮ ಜೊತೆ ಸಂತೋಷಪಟ್ಟುಕೊಂಡೇ ಇದ್ದಳು. ಆಸ್ಪತ್ರೆಯಲ್ಲಿ ಜನಿಸಿದ ಮೊಮ್ಮಕ್ಕಳಿಗಾಗಿ ಬಸ್ಸಿಡಿದು ಓಡಾಡಿ ಮಾಡಿದ್ದಳು. ಆಸ್ಪತ್ರೆಯ ಡಾಕ್ಟರು ಹೇಳಿದಂತೆ ಎಲ್ಲಾ ತಿಂದರೆ ಬೊಜ್ಜು ಬರುತ್ತದೆಯೆಂದು ಮೆಣಸಿನ ರಸ, ಜೀರಿಗೆ ರಸ ಇತ್ಯಾದಿ ಮಾಡಿ ತಿನ್ನು, ತಿನ್ನು ಎಂದಿದ್ದಳು. "ಬಾ, ಬಾ ಗುಬ್ಬಿಮರಿ, ತರುವೆನು ಕಡಲೆಪುರಿ" — ಎಂದು ಹಾಡುತ್ತಾ ನಮ್ಮ ಮರಿಗಳಿಗೆ ಗುಟುಕು ಉಣಿಸಿ, ಜೋಲಿ ತೂಗಿದ್ದಳು, ಈಕೆ ಇನ್ನಿಲ್ಲ. ಇರುವುದು ನೆನಪು ಮಾತ್ರ.

ಬದುಕ ಬೆಚ್ಚಗಾಗಿಸುವ ಹೃದಯ ಇನ್ನಿಲ್ಲ. ಮನಸ್ಸು ಚುಚ್ಚುತ್ತಿದೆ. ಸದಾ ಚುಚ್ಚುವ ನೆನಪುಗಳಿವೆ. ಹೆಣ ಎಳೆದು ಗುಣಿಯಲ್ಲಿ ಕೂರಿಸಿ ಮಣ್ಣು ಮುಚ್ಚುವಾಗ ವಿಕಾಸಗೊಂಡ ತಾಯಿಯ ಮುಖದ ಜ್ಞಾಪಕದಲ್ಲಿ ಊಟ ಸೇರುವುದಿಲ್ಲ. ಮಣ್ಣು ಮುಚ್ಚಿ ಅಲ್ಲಲ್ಲೇ ಮಾತನಾಡುವ ಜನರ ಮಧ್ಯದಲ್ಲಿ ಅಣ್ಣನ ಆರು ವರ್ಷದ ಮಗಳೊಬ್ಬಳು ಏನೋ ಹಾಡು ಗೂಣಗಿಕೊಳ್ಳುತ್ತಾ........ "ಇಬ್ಬರಾ ಋಣ ತೀರಿತೆಂದು ತಬ್ಬಿಕೋಡಿತು ಕಂದನ" ಎಂದು ಹೇಳುತ್ತಿದ್ದುದು ಜ್ಞಾಪಕಕ್ಕೆ ಬರುತ್ತದೆ.

ಸಮಾಧಾನವಾಗುತ್ತಿಲ್ಲ. ಎಲ್ಲ ಬಂದೂ....... ಒಂದು "ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ" — ಎಷ್ಟೋ ತತ್ವಜ್ಞಾನದ ಮಾತುಗಳಲ್ಲಿ ಮನಸ್ಸಿನ ಅಸ್ಥಿರತೆಗೊಂದು ಪರದೆಯೆಳೆಯಲು ಪ್ರಯತ್ನಿಸುತ್ತಿದ್ದೇನೆ, ಸಾಧ್ಯವಾಗುತ್ತಿಲ್ಲ "ಗುಡ್ ಬೈ ಗುಡ್ ಬೈ ಪಾರ್ಟಿಂಗ್ ಈಸ್ ಸಚ್ ಎ ಸ್ವೀಟ್ ಸಾರೋ" ಎಂದು ಹೇಳಬೇಕೆನಿಸುತ್ತದೆ. ಶಬ್ದಗಳು ಗಟ್ಟಿಯಾಗಿ ಕೊರಳಿನಿಂದ ಈಚೆ ಬರುವುದಿಲ್ಲ.

ಎಚ್. ಎಸ್. ಚಂಪಾವ್ವ

## ಮಿನಿ ಕವನಗಳು

ವಸ್ತುವಿನ ರೋಚಕತೆ
ಅನೇಕರ ಗಮನ ಸೆಳೆಯುತ್ತದೆ,
ಸತ್ಯ ಒಳಗೇ ನರಳುತ್ತದೆ.
ಬಹಿರಂಗದ ಬೇಗಡೆಗೆ ವೇಗದ ಪಟ್ಟ,
ಕೇಂದ್ರಬಿಂದು ಅಲಕ್ಷ್ಯಕ್ಕೆ ಗುರಿ.

o o o o

ಹೊಳೆಯುವುದೆಲ್ಲ ಚಿನ್ನವಲ್ಲ,
ಈ ಸೂಕ್ತಿಯನ್ನು ಬಲ್ಲೆ.
ಚಿನ್ನ ಹೊಳೆಯುವುದಂತೂ ನಿಜ,
ವಿವರಿಸಲು ನಾಸೊಲ್ಲೆ!

o o o o

ನಾನು ಕುಂಟ
ಆದರೂ
ನನಗೆ ಹಿಮಾಲಯದ್ದೇ ಮೋಹ.

ಡಾ|| ಎಚ್. ಎಸ್. ಸುಜಾತ.

# ಸಿನೆಮಾ

## ಬಾರೆ ನನ್ನ ಮುದ್ದಿನ ರಾಣಿ

ಕಳೆದ ವರ್ಷದಿಂದ ಈ ವರ್ಷದ ಅವಧಿಯಲ್ಲಿ "ಟೇಮಿಂಗ್ ಆಫ್ ದಿ ಶ್ರೂ" ವಸ್ತುವನ್ನು ಬಿಂಬಿಸುವ ಹಲವಾರು ಸಿನಿಮಾಗಳು ಬಂದಿವೆ. "ಅಂಜದ ಗಂಡು", "ನಂಜುಂಡಿ ಕಲ್ಯಾಣ", "ಒಂಟಿ ಸಲಗ" ........ಇತ್ಯಾದಿ. ಹೀಗೆ ಹಲವಾರು ಸಿನಿಮಾಗಳು ಗಂಡುಬೀರಿ ಹೆಣ್ಣನ್ನು ಪಳಗಿಸಿ, ಅವರ ಬಾಳು ಬೆಳಗಿಸಿ, ಗರತಿ ಗೌರಮ್ಮನನ್ನಾಗಿ ಮಾಡುವ ವಸ್ತುವನ್ನು ಬಂಡವಾಳವನ್ನಾಗಿಸಿಕೊಂಡು ಜನರಿಂದ ಬಂಡವಾಳ ದೋಚುವ ಕೆಲಸವನ್ನು ಮಾಡಿದವು. ಬರಿಯ ಬಂಡವಾಳ ದೋಚಿದ್ದರೆ ಬೇರೆಯೇ ಮಾತಿತ್ತು. ಜೊತೆಗೆ ಅನಿವಾರ್ಯ ಕಾರಣಗಳಿಂದ ಕ್ರಮೇಣ ನಶಿಸಿ ಹೋಗುತ್ತಿರುವ ಪುರುಷ ಪ್ರಧಾನ ಮೌಲ್ಯಗಳನ್ನು ರೋಮಾಂಚಕಾರಿಯಾಗಿ, ವಿಜೃಂಭಿಸಿ ಎತ್ತಿ ಹಿಡಿದು ಸ್ತ್ರೀಯರಿಗೆ ಅಪಾಯಕಾರಿಯಾಗಿರುವ, "ಟ್ರೆಂಡ್" ಒಂದನ್ನು ಹುಟ್ಟು ಹಾಕಿತು.

ಇದಕ್ಕೆ ಅಪವಾದವೆಂಬಂತೆ ಸ್ತ್ರೀಯರಿಗೆ ಪುರೋಗಾಮಿಯಾಗಿರುವ ಹಲವಾರು ಸಿನಿಮಾಗಳೂ ಬಂದಿವೆ. ಈ ವರ್ಷ ಸಾಕಷ್ಟು ಪ್ರತಿಕ್ರಿಯೆ ಪಡೆದು ದಟ್ಟ ಜನಸಂಖ್ಯೆಯಿಂದ ನಡೆಯುತ್ತಿರುವ "ಬಾರೆ ನನ್ನ ಮುದ್ದಿನ ರಾಣಿ" ಇಂತಹ ಒಂದು ಚಿತ್ರ. ಶಶಿಕುಮಾರ್ ಹಾಗೂ ಮಹಾಲಕ್ಷ್ಮಿ ನಟಿಸಿರುವ ಈ ಸಿನೆಮಾ ಎಲ್ಲಾ ವ್ಯಾಪಾರಿ ಚಿತ್ರಗಳ ಸೂತ್ರಗಳನ್ನು ಹೊಂದಿ, ಆ ನಡುವೆಯೂ ಸ್ತ್ರೀಯರ ಬದುಕಿನ ಅನೇಕ ಪ್ರಶ್ನೆಗಳನ್ನು ಇದು ಎತ್ತುತ್ತದೆ. ಮಹಾಲಕ್ಷ್ಮಿ ಜೀವಂತಗೊಳಿಸಿದ ನಾಯಕಿಯ ಪಾತ್ರದಿಂದಾಗಿ ಸಿನೆಮಾದ ಹಲವಾರು ಮೌಲ್ಯಗಳು ಒಂದಿಷ್ಟು ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತವೆ.

"ಬಾರೆ ನನ್ನ ಮುದ್ದಿನ ರಾಣಿ"-ಕಾರ್ಯೇಷು ದಾಸಿ, ಸಲಹೇಷು ಮಂತ್ರಿ........ಯಂತಹ ಮೌಲ್ಯಗಳಿಂದ ಹಿಡಿದು ವರದಕ್ಷಿಣೆ, ಕನ್ಯಾ ಪರೀಕ್ಷೆ, ದ್ವಿಪತ್ನಿತ್ವ, ಚಂಡಾಯಿಸುವಿಕೆ, ಮದುವೆಯಾಚೆಗಿನ ಸಂಬಂಧ, ದಾಂಪತ್ಯ ಸಂಬಂಧಗಳವರೆಗೂ ಅತೀ ಸೂಕ್ಷ್ಮವಾದ ವಿಚಾರಗಳನ್ನು ಒಳಗೊಂಡಿದೆ. ಈ ಸಮಸ್ಯೆಗಳೂ ಇಲ್ಲಿ ಆಳವಾಗಿ ವಿಶ್ಲೇಷಿಸಲ್ಪಟ್ಟಿಲ್ಲ. ಕಲಾತ್ಮಕವಾಗಿ ಚಿತ್ರಿತವಾಗಿಲ್ಲ. ಆದಾಗ್ಯೂ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿರುವುದೇ ಈ ಸಿನೆಮಾದ ಪ್ಲಸ್ ಪಾಯಿಂಟ್ ಆಗಿದೆ.

ಕಾರ್ಯೇಷು ದಾಸಿ ಸಲಹೇಷು ಮಂತ್ರಿ....... ಇತ್ಯಾದಿ ಗುಣಗಳ ಬಯಸಿ ನಾಯಕ ಪೇಪರ್‌ನಲ್ಲಿ ಜಾಹಿರಾತು ನೀಡುತ್ತಾನೆ. ಸ್ತ್ರೀಯರ ಬದುಕಿನ ಬಗ್ಗೆ ಕಾಳಜಿ ಹೊಂದಿದ ನಾಯಕಿ ಹಾಸ್ಯಾತ್ಮಕವಾಗಿ ಇವುಗಳನ್ನು ವಿರೋಧಿಸಿ, ಕೊನೆಗೆ ಆತನಿಗೆ ಬುದ್ಧಿ ಕಲಿಸಲು ಛಾಲೇಜ್ ಮಾಡಿ ಆತನನ್ನೇ ಮದುವೆಯಾಗುತ್ತಾಳೆ. ಕಾಲು ನೋವು, ತಲೆ ನೋವು ಎಂದು ನರಳುವ ಹೆಂಡತಿಯ ಕಾಲೊತ್ತುವ ನಾಯಕ, "ಹುಷಾರಾಯ್ತು, ಈಗ ಪರವಾಗಿಲ್ಲ" ಎಂದು ಬಡಬಡಿಸುತ್ತಾ ಸಹನೆ ಕಳೆದುಕೊಳ್ಳತೊಡಗಿದಾಗ, ಗಂಡಸರ ಮೂಲಭೂತ ಕಾಳಜಿ ಹೆಂಡತಿ ಹುಷಾರು ತಪ್ಪುವ ಬಗ್ಗೆ ಅಲ್ಲ, ಆಕೆಯ ಜೊತೆ ರಾತ್ರಿ ಕಳೆಯುವ ಬಗ್ಗೆ ಎನ್ನುತ್ತಾಳೆ ನಾಯಕಿ. ಆಕೆಗೆ ಚಡಾಯಿಸಿ, ಆಕೆಯೊಂದಿಗೆ ಸಂಬಂಧ ಬಯಸಿ ನಿರಾಶರಾದ ಆಕೆಯ ಗಂಡನ ಸ್ನೇಹಿತರು ಆಕೆಯ ಬಗ್ಗೆ ಇಲ್ಲ-ಸಲ್ಲದ ಅಪವಾದ ಹೊರಿಸಿದಾಗ ಅವರಿಬ್ಬರ ಮಧ್ಯೆ ವಿರಸ ಉಂಟಾಗುತ್ತದೆ. ವಿರಸದ ಸಂದರ್ಭದಲ್ಲಿ ಆಕೆಯನ್ನು ಆತ ತುಚ್ಛವಾಗಿ ಕಂಡು ತನ್ನ ಪುರುಷತ್ವವನ್ನು ಚಲಾಯಿಸಲು ಇಚ್ಛಿಸುತ್ತಾನೆ. "ಏನೇ" ಎಂದು ಆತ ಕರೆದಾಗ ಆಕೆಯೂ "ಏನಲೋ" ಎಂದು ಎದುರು ನಿಲ್ಲುತ್ತಾಳೆ. ವಿರಸದಿಂದಾಗಿ ಬೇರೆ ಬೇರೆಯಾಗುವ ನಾಯಕಿ-ವ್ಯಭಿಚಾರಿ ಪಟ್ಟ ಹೊತ್ತುಕೊಂಡು ದೂರ ಸರಿಯುತ್ತಾಳೆ. ಮತ್ತೆ ಆಕೆ ಗರ್ಭಿಣಿ ಎಂಬ

ವಿಚಾರ ತಿಳಿದು ಬಂದಾಗ ನಾಯಕ ತನ್ನ ಮಗುವಿಗಾಗಿ ಹಂಬಲಿಸಿ, ಆಕೆಗೆ "ಅಬಾರ್ಷನ್" ಮಾಡಿಸಿಕೊಳ್ಳುವ ಹಕ್ಕಿಲ್ಲವೆನ್ನುತ್ತನೆ, "ಆ ಮಗು ನಿನ್ನದೇ ಎನ್ನುವುದು ಏನು ಗ್ಯಾರಂಟೀ" ಎಂದು ಆತನ ಅನುಮಾನಗಳನ್ನು ಕೆದಕುವ ಆಕೆ ಏನೂ ದುಡಿಯದೇ ಅಪ್ಪನ ಆಸ್ತಿಯಲ್ಲಿ ಸಂಬಳ ತೆಗೆದು ಬದುಕುವ ಆತನನ್ನು ತಮಾಷೆ ಮಾಡುತ್ತಾಳೆ. ಹೆಂಗಸಿನ ಶ್ರಮದ ಮೌಲ್ಯವನ್ನು ಲೆಕ್ಕ ಹಾಕಿ ಮನೆಗೆಲಸ ಹಾಗೂ ಇತರ ಕೆಲಸಗಳಿಂದ ಆಕೆ ತಿಂಗಳಿಗೆ ೩೦,೦೦೦ರಷ್ಟು ರೂಪಾಯಿಂದ ಶ್ರಮ ವ್ಯಯಿಸುತ್ತಾಳೆ ಎನ್ನುತ್ತಾಳೆ. ಆಕೆಯ ಶ್ರಮ ಕಣ್ಣಿಗೆ ಕಾಣಿಸುವುದಿಲ್ಲ, ಆಕೆ ವ್ಯಕ್ತಿಯಾಗಿ ಕಾಣೋದಿಲ್ಲ. ಹೀಗೆಂದಾಗ ಕೊನೆಗೆ ನಾಯಕನಿಗೆ ಪಶ್ಚಾತ್ತಾಪವಾಗುತ್ತದೆ.

ಈ ಹಂದರದ ಸಿನಿಮಾ ಹೆಂಗಸರ ಬದುಕಿನ ಸೂಕ್ಷ್ಮಗಳನ್ನು ಎತ್ತಿ ಹಿಡಿಯುತ್ತದೆ. ಸ್ತ್ರೀಯ ಬದುಕಿನ ಎಲ್ಲಾ ಹರವುಗಳ ಮೇಲೆ ಈ ಸಿನೆಮಾ ಬೆಳಕು ಚೆಲ್ಲುತ್ತದೆ. ಕೊನೆಗೆ ವ್ಯಾಪಾರಿ ಚಿತ್ರಗಳು ಇಷ್ಟರಮಟ್ಟಿಗಾದರೂ ಹೆಂಗಸರ ಬದುಕಿನ ಬಗ್ಗೆ ಕಾಳಜಿ ತೋರಿಸಿ ಸಿನೆಮಾ ತೆಗೆದರೆ ಸ್ತ್ರೀಯರ ಬದುಕನ್ನು ಸೃಷ್ಟ್ಯಾತ್ಮಕವಾಗಿಸುವ ಸಂಸ್ಕೃತಿಯನ್ನು ಹುಟ್ಟು ಹಾಕಿ ಬೆಳೆಸುವಲ್ಲಿ ಗಣನೀಯ ಪಾತ್ರ ವಹಿಸುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

ಕಲಾವತಿ

## ಹಕ್ಕಿಯು.....

ಎತ್ತರದ ಮಿತಿಗಳಲಿ
ಎಂತು ಹಾರಲಿ?
ಕರೆಯುತಿದೆ ಆಗಸವು
ಹಾರಲು ಬಿಡಿನ್ನು

ಪಂಜರದ ಗೋಡೆಗಳ
ಕುಕ್ಕುತ ಅಸಹಾಯಕತೆಯಲ್ಲಿ
ದಿಕ್ಕುಗಳಿಗಾಗಿ ತಡಕಾಡುತ
ಹೇಗೆ ಹಾಡಲಿ?

ಸವಿನುಡಿಗಳನಾಡುತ
ಕಳೆದು ಹೋಗದಿರಲಿ
ಹಾರಾಡುವ ದಿನಗಳು
ಹರೆಯದ ಕ್ಷಣಗಳು

ಚುಕ್ಕಿಗಳ ದಾರಿಯಲಿ
ಚಂದಿರ ನಗುತಿರುವಾಗ
ಹೇಗೆ ತುಂಬಿಕೊಂಡಾವು
ಕಂಗಳು ಕತ್ತಲನು?

ನಾನೊಂದು ಹಕ್ಕಿಯು
ಹಾಡುವ ಹೃದಯವು
ನಿನ್ನ ಕೇಳುವೆನು
ಬೇಡಿನ್ನು ಪಂಜರವು.

-ಉಜ್ವಲಾ ಪುಣಜಗೌಡ

---

### ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

# ಸ್ತ್ರೀಯರ ಶೋಷಣೆಯ ಒಂದು ನೋಟ

ಲಲಿತಾಜ ಮುಲ್ಲಾರ.

ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳು ಹೇಗಿದ್ದವು? ಕಾಲಕ್ರಮೇಣ ಯಾವ ರೀತಿಯ ಬದಲಾವಣೆಗಳಾದವು? ಅದರಲ್ಲೂ ಗ್ರಾಮೀಣ ಮಹಿಳೆಯರ ಎದುರಿಸುತ್ತಿರುವ ಸಮಸ್ಯೆಗಳಾವುವು? ಸಂಪ್ರದಾಯದ ಕಟ್ಟುಪಾಡುಗಳಿಂದ ಸ್ತ್ರೀಯರನ್ನು ಯಾವ ರೀತಿ ಶೋಷಣೆ ಮಾಡುತ್ತಿದ್ದಾರೆ? ಸಮಾಜನೊಂದಿಗೆ, ಹೆಣ್ಣೇ ಮತ್ತೊಂದು ಹೆಣ್ಣಿನ ಶೋಷಣೆ ಮಾಡುತ್ತಿರುವುದು ವಿಪರ್ಯಾಸ.

ಒಂದು ವಿದ್ಯಾವಂತ, ಉತ್ತಮ ಮನೆತನದಲ್ಲಿ ಗಂಡ ಸತ್ತಾಗ ಚಿಕ್ಕ ಪ್ರಾಯದ ಹೆಣ್ಣನ್ನು ನಡೆಸಿಕೊಂಡ ರೀತಿಯನ್ನು ನೋಡಿದಾಗ ಹೃದಯಕ್ಕೆ ಬೆಂಕಿಯಿಟ್ಟಂತಾಯಿತ್ತು, ಅದನ್ನು ಪ್ರತಿಭಟಿಸುವ ಎದೆಗಾರಿಕೆ ಯಾವ ಮಹಿಳೆಗೂ ಇರಲಿಲ್ಲವೆನ್ನುವುದೇ ಆಶ್ಚರ್ಯಕರ.

ಮಹಿಳೆ ಜೀವನದಲ್ಲಿ ಉನ್ನತ ಸ್ಥಾನಕ್ಕೇರದೆ, ಇರಲು ಆಕೆ ಬೆಳೆಸಿಕೊಂಡು ಬಂದ ಪೂರ್ವಗ್ರಹಗಳು ಮತ್ತು ಆಕೆಯ ಪರಿಮಿತಿಯೇ ಕಾರಣವೆಂದರೆ ತಪ್ಪಾಗಲಾರದು. ಗಂಡು ಬಲಿಷ್ಟ, ತಾನು ಅಬಲೆ ಎನ್ನುವ ಕೀಳರಿಮೆಯನ್ನು ತೊರೆಯದೆ ಇದ್ದರೆ ಸಮಾನತೆಯ ಹೋರಾಟ ವ್ಯರ್ಥ.

ಸ್ತ್ರೀಯರಿಗೂ ಸಮಾನ ಹಕ್ಕುಗಳು ದೊರೆಯಬೇಕೆಂದು ಆಂದೋಲನ ಪ್ರಾರಂಭವಾಗಿ ೪ ದಶಕಗಳ ಹತ್ತಿರವಾಯಿತ್ತು. ಅದರಂತೆ ಕೆಲವು ಹಕ್ಕುಬಾಧ್ಯತೆಗಳು ದೊರೆತಿದ್ದರೂ, ಸ್ತ್ರೀಯರು ಸಂಪ್ರದಾಯದ ನೆರಳಲ್ಲಿ ನರಳುತ್ತಲಿದ್ದಾರೆ.

ಒಂದು ಕಡೆ ಸ್ತ್ರೀ ಸಮಾನತೆ ಬಗ್ಗೆ ವೇದಿಕೆಯ ಮೇಲೆ ಭಾಷಣ ಬಿಗಿಯುತ್ತಿದ್ದರೆ, ಗಂಡ ಸತ್ತ ಗಳಿಗೆಯಲ್ಲೆ ಹೆಣ್ಣನ್ನು ಕುರೂಪಗೊಳಿಸಿ ಕತ್ತಲ ಕೋಣೆಗೆ ತಳ್ಳುತ್ತಿರುವುದು ಇನ್ನೊಂದು ವಿಪರ್ಯಾಸ. ಮಹಿಳೆಯರ ಸಮಸ್ಯೆಗಳ ಬಗ್ಗೆ ಕಾಳಜಿಯಿದ್ದ ಮಹಿಳೆಯೇ ಇಂತಹ ಸನ್ನಿವೇಶಕ್ಕೆ ಸಿಲುಕಿದ ನಿದರ್ಶನ ಎಂತಹವರ ಎದೆಯನ್ನೂ ನಡುಗಿಸುವಂಥದ್ದು. ಇಂಥಹದನ್ನು ಪ್ರತಿಭಟಿಸುವ ಛಲ ಇನ್ನು ಸಾಮಾನ್ಯ ಸ್ತ್ರೀಯರಿಂದೆಲ್ಲಿ ಸಾಧ್ಯ? ಇದು ಪುರುಷರಿಂದ ಮಾತ್ರ ನಡೆಯುವ ಶೋಷಣೆಯೆ? ಇದಕ್ಕೆ ಸ್ತ್ರೀಯರೂ ಕುಮ್ಮಕ್ಕು ನೀಡುತ್ತಿಲ್ಲವೆ? ಸ್ತ್ರೀ ದಾಂಪತ್ಯ ಜೀವನಕ್ಕೆ ಕಾಲಿಟ್ಟ ಗಳಿಗೆಯಲ್ಲಿ ಪಡೆಯುವಂಥ ಸಾಧನಗಳು ಇವಾಗಿದ್ದರೆ ಅಂತಹದನ್ನು ತ್ಯಜಿಸುವುದು ಸ್ವಾಭಾವಿಕ.

ಆದರೆ ಸಹಜ ಹುಟ್ಟಿನಿಂದಲೇ "ಹೂ, ಕುಂಕುಮ, ಮೂಗುಬೊಟ್ಟು, ಬಳೆ, ಸರ" ಗಳನ್ನು ಧರಿಸುವ ರೂಢಿಯಿದ್ದು, ಅದನ್ನು ಮದುವೆಯ ಕುರುಹು ಎಂದು ಗಂಡ ಸತ್ತಾಗ ತೆಗೆದು, ಗಂಡನ ಚಿತೆಗೆ ಅರ್ಪಿಸುತ್ತಿರುವುದು ಯಾವ ನ್ಯಾಯ?

ಅದೇ ಹೆಂಡತಿ ಸತ್ತರೆ, ಗಂಡನಿಗೆ ಯಾವ ಕಟ್ಟುಪಾಡುಗಳಿರುವುದಿಲ್ಲವಲ್ಲ ಯಾಕೆ? ಪುರುಷರು ವಿಧುರನೆಂದು ಅವಹೇಳನ ಮಾಡುವರೇ? ಪುರುಷರಲ್ಲಿರುವ ಒಗ್ಗಟ್ಟು ನಮ್ಮಲ್ಲಿಲ್ಲದಿರುವುದೇ ನಮ್ಮ ಶೋಷಣೆಯನ್ನು ನಾವೇ ಮಾಡಿಕೊಳ್ಳುತ್ತಿರುವ ಕುರುಹ. ಆದರೆ ಇಪ್ಪತ್ತೊಂದನೆಯ ಶತಮಾನದ ಮಹಿಳೆ ನಾಗರೀಕತೆಯೆಡೆಗೆ ಸಾಗಿ ಇನ್ನೂ ಎಚ್ಚೆತ್ತುಕೊಳ್ಳದೆ ಇಂತಹ ಕುರುಡು ಪದ್ಧತಿಗಾಗಿ ಹೋರಾಟ ಮಾಡಬೇಕಾಗಿರುವುದು ನಾಚಿಕೆಗೇಡಿನ ಸಂಗತಿ. ಕೇವಲ ಉದ್ಯೋಗಕ್ಕಾಗಿ, ಪ್ರತಿಷ್ಠೆಗಾಗಿ ವಿದ್ಯಾವಂತರಾಗದೆ, ಸಾಮಾಜಿಕ ನ್ಯಾಯದೊಂದಿಗೆ ಸ್ವತಂತ್ರವಾದ ಅಸ್ತಿತ್ವವುಳ್ಳ ದೃಢ ಮನಸ್ಸನ್ನು ಗಳಿಸಿ ವಿದ್ಯೆಯ ಸತ್ವವನ್ನು ಹೀರಿಕೊಂಡು ಬೆಳೆದ ವಿಶಾಲ ಮನದ ಜ್ಞಾನವೃಕ್ಷದ ಸ್ತ್ರೀಯರಾಗಿ ಬಾಳುವ ಎಂದು ನಿರ್ಧರಿಸೋಣವೆ?

# ಸಾವಿನ ಗಳಿಗೆಯಲ್ಲಿ

ಸಾವಿನ ಗಳಿಗೆಯಲ್ಲಿ
ಕಾಲ
ನಿಧಾನವಾಗಿ ಚಲಿಸುತ್ತಾನೆ,
ಭಾವನೆಗಳ ನೂಕು–ನುಗ್ಗಲಿನಲ್ಲಿ
ಸವೆದು ಹೋದ, ನುಚ್ಚುನೂರಾದ
ಹೃದಯದ ತಂತಿಗಳನ್ನು
ಬಲವಾಗಿ ಹಿಡಿದೆಳೆಯುತ್ತಾನೆ.

ಸಾವಿನ ಹೊರೆಯಿಂದ
ಅಸಹನೀಯ ವೇದನೆ
ಇದುವರೆಗೆ ಅದುಮಿಟ್ಟ
ಸಂಕಟ–ನಿರಾಶೆಗಳು ಚಿಮ್ಮಲು
ಸಿದ್ಧವಾಗಿ
ಅಂಚಿನಲ್ಲಿ ತುಂಬಿ ನಿಂತಿದ್ದರೂ
ಇನ್ನೂ ಸುರಿಸದ ಕಣ್ಣೀರಿನ
ರಕ್ತ ದ್ವಾರಗಳನ್ನು
ಮುಚ್ಚಿಯೇ ಇಟ್ಟಿರುವೆ.

ಕಾಣದ ಕೈಗಳು
ನಿಶ್ಚಯಿಸಿದ ಗಳಿಗೆಯನ್ನು
ತಡೆಯಲಾರದ
ನಿಸ್ಸಹಾಯಕರು;
ಮೌನವಾಗಿ ಆತನ
ಇಚ್ಛೆಯನ್ನು
ಅನುಸರಿಸುತ್ತೇವೆ.

ಗೀತಾಂಜಲಿ.
ಕನ್ನಡಕ್ಕೆ: ಪಾರ್ವತಿ ಬಾಳಿಕೆ.

# ಅನುಪಮಾ – ಒಂದು ಸ್ಮರಣೆ

ಸಾಂಪ್ರದಾಯಿಕ ಜಗತ್ತಿನಿಂದ ಆರಿಸಿದ ಸಾಂಪ್ರದಾಯಿಕ ಸ್ತ್ರೀ ಚಿತ್ರಗಳ ಚಿತ್ರಿಸುತ್ತಲೇ ಈ ಹೊತ್ತಿನ ಸ್ತ್ರೀಯರ ಸೂಕ್ಷ್ಮ ಮನಸ್ಸುಗಳನ್ನು, ಸೂಕ್ಷ್ಮ ಸಂವೇದನೆಗಳನ್ನು ತಮ್ಮ ಬರಹಗಳಲ್ಲಿ ಹಿಡಿದಿಡುವಷ್ಟು ಬೆಳೆದ ಬರಹಗಾರ್ತಿ ಅನುಪಮಾರವರ ಬದುಕು ನಮ್ಮ ನಡುವಿನದು. ಅಂಟಿಕೊಂಡ ಮೌಲ್ಯಗಳು ಪ್ರಶ್ನಾತೀತವಾಗುವಂತಹ ಸಂದರ್ಭದಲ್ಲಿ ಮನತೆರೆದು ಸ್ಪಂದಿಸಿದ ಇವರ ಬರಹಗಾರ್ತಿ ಸ್ಪಂದನೆ ಒಡಮೂಡಿದುದು ಇವರ "ಆಳ", "ಮೂಲಮುಖಿ", "ಸೇವೆ", "ಮುಕ್ತಿ ಚಿತ್ರ", "ಮಾಧವಿ" ಈ ಕಾಂದಬರಿಗಳಲ್ಲಿ. ಅನುಪಮಾರವರ ತಲೆಮಾರಿನ ಲೇಖಕಿಯರ ಜೊತೆ ನಮಗೆ ಉಂಟಾದ ಅಗಾಧ ಬಿರುಕು ಇವರ ಮಧ್ಯೆ ಉಂಟಾಗದುದಕ್ಕೆ ಇವರ ಈ ಸಾಹಿತ್ಯಕ ಬೆಳವಣಿಗೆಯೇ ಕಾರಣ. ಕ್ಯಾನ್ಸರ್ ಜೊತೆ ಹೊಡೆದಾಡುತ್ತಲೇ ಸಾವಿನಾಚೆಯ ದಡದಲ್ಲಿ ನಿಂತು ಸಾಹಿತ್ಯಕ್ಕೆ ಈಕೆ ತಮ್ಮನ್ನು ಸಮರ್ಪಿಸಿಕೊಂಡ ಬದುಕು ಸ್ಫೂರ್ತಿದಾಯಕವಾದದ್ದು. ಈ ಚೇತನ ಇಂದು ಒಂದು ನೆನಪು ಮಾತ್ರ.

"ಮಾನಸ" ಬಳಗದ ಪರವಾಗಿ

# ಒಂದು ಸಾರ್ಥಕ ಬದುಕು [ನೆನಪು]

ಶ್ರೀಮತಿ ಅನುಪಮಾ ನಿರಂಜನ ಅವರು ೫೭ ವರುಷಗಳ ಸಾರ್ಥಕ ಬಾಳನ್ನು ಬಾಳಿ ಈಗ ನಮ್ಮನ್ನು ಅಗಲಿದ್ದಾರೆ. ಅವರನ್ನು ಕೇವಲ ಒಬ್ಬ ವೈದ್ಯೆ ಎಂದಾಗಲೀ, ಲೇಖಕಿ ಎಂದಾಗಲೀ ನಿರ್ಧರಿಸುವುದು ಸಮಂಜಸವಾಗಲಾರದು. ಅವರು ಹೆಣ್ಣು ಮಕ್ಕಳ ಬದುಕಿನ ಸ್ಫೂರ್ತಿದಾಯಕಿಯಾಗಿದ್ದರು. ಅವರು ಕೇವಲ ಒಬ್ಬ ವ್ಯಕ್ತಿಯಾಗಿರದೆ ಬದುಕಿನ ಶಕ್ತಿಯಾಗಿದ್ದರು.

ಅನುಪಮಾ ನಿರಂಜನ ಒಬ್ಬ ವೈದ್ಯೆಯಾಗಿ, ಶಕ್ತಿಯಾಗಿ, ಮಾತೆಯಾಗಿ, ಲೇಖಕಿಯಾಗಿ ತಮ್ಮ ಬದುಕನ್ನು ಶ್ರೀಮಂತಗಳಿಸಿಕೊಂಡಿದ್ದರು ಮತ್ತು ಸಾಹಿತ್ಯದ ಮೂಲಕ ಸುತ್ತಲಿನವರ ಬದುಕನ್ನು ಶ್ರೀಮಂತಗೊಳಿಸಿದರು. ಬರಹ ಅವರ ಪ್ರೀತಿಯ ವಿಷಯವಾಗಿತ್ತು. ಕೊನೆಕೊನೆಗೆ ಅವರು ತಮ್ಮ ಪೂರ್ಣಸಮಯವನ್ನು ಬರಹಕ್ಕೇ ಮೀಸಲಿಟ್ಟರು. ಸುತ್ತಲಿನ ಸಮಾಜದ ಹೆಣ್ಣುಮಕ್ಕಳ ಬದುಕನ್ನು ಕಂಡು, ಅವರ ನೋವು, ನಲಿವುಗಳಿಗೆ ಸ್ಪಂದಿಸಿ, ಹೆಣ್ಣುಮಕ್ಕಳ ಬದುಕಿನ ಕಷ್ಟಸುಖಗಳನ್ನು ವಿಶ್ಲೇಷಿಸಿದರು, ವಿಚಾರಮಾಡಿದರು, ಬರಹಕ್ಕೆ ಇಳಿಸಿದರು.

ಖ್ಯಾತ ವೈದ್ಯೆಯಾಗಿ ವೈದ್ಯಕೀಯ ಜ್ಞಾನವನ್ನು ಹೊಂದಿದ್ದ ಅವರು ತಮ್ಮ ಅನುಭವಗಳಿಂದ, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಪ್ರಾಯದಲ್ಲಿ ಹುಡುಗಿಯರಲ್ಲಾಗುವ ದೈಹಿಕ, ಮಾನಸಿಕ ಬೆಳವಣಿಗೆಗಳು, ಬದಲಾವಣೆಗಳು, ಅದರಿಂದ ಬದಲಾಗುವ ಅವರ ಸ್ವಭಾವ ಇವುಗಳ ಬಗೆಗೆ ವಿಚಾರ ಮಾಡಿದ್ದಾರೆ. ಮದುವೆಯಾದ ಹುಡುಗಿಯ ದಾಂಪತ್ಯ ಜೀವನದ ಬಗೆಗೆ ಹೇಳಿದ್ದಾರೆ. ತಾಯಿ ಮಗುವಿನ ಸಂಬಂಧ ಹೇಗಿರುತ್ತದೆ ಎಂಬುದನ್ನು ವಿವರಿಸಿರುತ್ತಾರೆ.

ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ," ಗಂಡು ಮಕ್ಕಳ ಬಗೆಗೆ ಪೋಷಕರು ತೋರುವ ವಿಶೇಷವಾದ ಒಲವು, ಪಕ್ಷಪಾತವನ್ನು ತಮ್ಮ ಕಥೆ, ಕಾದಂಬರಿಗಳಲ್ಲಿ ಖಂಡಿಸಿದ್ದಾರೆ. ಮಗಳಿಗೆ ನಾಲ್ಕು ಗೋಡೆಯೊಳಗಿರುವುದೇ ಮನೆ, ಮಗನಿಗೆ ಹೊರಗಿನ ಪ್ರಪಂಚವೇ ಮನೆ ಎಂಬುದು ತಪ್ಪಬೇಕು. ಹುಡುಗಿಯರನ್ನೂ ಚಿಕ್ಕಂದಿನಿಂದ ಪಕ್ಷಪಾತ ಬುದ್ಧಿಯನ್ನು ತೋರದೆ ಸಾಕಷ್ಟು ಸ್ವಾತಂತ್ರ್ಯವನ್ನು ಕೊಟ್ಟು, ಧೈರ್ಯವಂತೆಯರನ್ನಾಗಿ ಬೆಳೆಸಬೇಕು. ಹುಡುಗಿಯ ವಿದ್ಯಾಭ್ಯಾಸಕ್ಕೆ, ಸರ್ವತೋಮುಖ ಬೆಳವಣಿಗೆಗೆ ಪೋಷಕರು ಪ್ರೋತ್ಸಾಹಿಸಬೇಕು ಎಂದಿದ್ದಾರೆ.

ಹೆಣ್ಣುಮಕ್ಕಳು ಸ್ವಾವಲಂಬಿಯರಾಗಿರಬೇಕು. ಆರ್ಥಿಕ ಸ್ವಾತಂತ್ರ್ಯವೇ ಸ್ವಾವಲಂಬನೆಯ ತಳಹದಿ ಎಂದವರು ಅನೇಕ ಕಡೆ ಒತ್ತಿ ಹೇಳಿದ್ದಾರೆ. ಇಂದಿನ ದಿನಗಳಲ್ಲಿ ಮಹಿಳೆಯಾದವಳು ಹೇಗೆ ಉದ್ಯೋಗ, ಹಾಗೂ ಸಂಸಾರ ಎಂಬ ಎರಡೂ ದಡಗಳ ನಡುವೆ ಸೆಣಸಾಡಬೇಕಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ.

"ನಲವತ್ತು ನೋವಿನ ಅಂಚು" ಇದರಲ್ಲಿ ನಲವತ್ತನೆಯ ವಯಸ್ಸನ್ನು ತಲುಪಿದ ಮಹಿಳೆಯ ಪ್ರಾಯ ಇಳಿಮುಖವಾಗುತ್ತಾ ಬರುತ್ತದೆ. ಮನೆಯಲ್ಲಿರುವ ಮಗಳು ಏರುಯೌವನದ ಹಂತವನ್ನು ತಲುಪಿರುತ್ತಾಳೆ. ಅವರಿಬ್ಬರ ನಡುವಿನ ಸೆಣಸಾಟ, ನಲವತ್ತರ ಮಹಿಳೆಯ ಮಾನಸಿಕ ನೋವು, ನಲಿವುಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಮುಟ್ಟು ನಿಲ್ಲುವ ವಯಸ್ಸಿನ ಮಹಿಳೆಯ ತೊಂದರೆಗಳು, ಅವಳ ಮಾನಸಿಕ, ದೈಹಿಕ ಬದಲಾವಣೆಗಳು, ಅದಕ್ಕೆ ಕಾರಣ–ಪರಿಹಾರ ಇತ್ಯಾದಿಗಳನ್ನು ತಿಳಿಸಿದ್ದಾರೆ. ಮತ್ತೂ ಹೆಚ್ಚಿನ ವಯಸ್ಸಾಗಿರುವ ಮಹಿಳೆಯರಲ್ಲಿ ದೈಹಿಕ ದುರ್ಬಲತೆ, ಮಾನಸಿಕ ಹಿಂಜರಿಕೆ ಇವುಗಳ ಬಗೆಗೆ ಬರೆದಿರುವ ಅವರು, ವಯಸ್ಸಾದ ಮಹಿಳೆಯರಿಗೆ ಜವಾಬ್ದಾರಿ ಕಡಿಮೆಯಾಗುವುದಿಲ್ಲ ಮತ್ತೂ ಹೆಚ್ಚಾಗುತ್ತದೆ. ಮಕ್ಕಳ ಜವಾಬ್ದಾರಿ ಎಲ್ಲಾ ಮುಗಿದರೆ ಮೊಮ್ಮಕ್ಕಳ ಜವಾಬ್ದಾರಿ ವಹಿಸುತ್ತಾರೆ ಮಕ್ಕಳು. ಈ ರೀತಿ ಮೊಮ್ಮಕ್ಕಳ ಜವಾಬ್ದಾರಿ ವಹಿಸಿಕೊಳ್ಳುವುದರಿಂದ

ಸಮಯವೂ ಸರಿಯುತ್ತದೆ, ಬದುಕಿನಲ್ಲಿ ಆಸಕ್ತಿಯೂ ಮೂಡುತ್ತದೆ ಎಂದಿದ್ದಾರೆ.

ಹುಡುಗಿಯರು ಮದುವೆಯಾದೊಡನೆ ಆರ್ಥಿಕ ಸ್ವಾತಂತ್ರ್ಯವನ್ನು ಕಳೆದುಕೊಂಡು ಮೂಲೆಗುಂಪಾಗದೆ, ಉದ್ಯೋಗಸ್ಥರಾಗಿ, ಸ್ವಾವಲಂಬಿಗಳಾಗಿ, ದಿಟ್ಟೆಯರಾಗಿ ಬದುಕಬೇಕು. ಪುರುಷನ ಸರಿಸಮಕ್ಕೆ ಎಲ್ಲಾ ಕ್ಷೇತ್ರಗಳಲ್ಲೂ ದಾಪುಗಾಲು ಹಾಕಿ ಹೆಸರು ಮಾಡಬೇಕು.

ಖ್ಯಾತ ವೈದ್ಯೆಯಾಗಿದ್ದ ಅನುಪಮಾರವರು ಅನೇಕ ಬಗೆಯ ಖಾಯಿಲೆಗಳು, ರೋಗ ರುಜಿನಗಳು, ಅದಕ್ಕೆ ಕಾರಣ, ಪರಿಹಾರ ಮುಂತಾದವುಗಳನ್ನು ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ. ಕ್ಯಾನ್ಸರ್ ವಿರುದ್ಧ ದಿಟ್ಟ ಹೋರಾಟ ನಡೆಸಿದ ಅವರು ತಮ್ಮ ನೆನಪು ಸಿಹಿ, ಕಹಿಯಲ್ಲಿ ಅದನ್ನು ತೋಡಿಕೊಂಡಿದ್ದಾರೆ. "ಬರಹಗಾರ್ತಿಯ ಬದುಕು" ಇದರಲ್ಲಿ ಬರಹಗಾರ್ತಿಯಾದವಳಿಗೆ ಕುಟುಂಬದ, ಹೊರಗಿನ ಪ್ರೋತ್ಸಾಹ ಅಗತ್ಯ. ಬರಹಗಾರ್ತಿಯಾದವಳು ಯಾವ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅವೆಲ್ಲವನ್ನೂ ಮೆಟ್ಟಿನಿಂತು ಅವರು ಹೇಗೆ ಬದುಕಿನಲ್ಲಿ ಬರಹವನ್ನು ಒಂದು ಅಂಗವಾಗಿ ಮಾರ್ಪಡಿಸಿಕೊಂಡರು ಎಂಬುದನ್ನು ವಿಶದಪಡಿಸಿದ್ದಾರೆ.

ಅವರ ಇತ್ತೀಚಿನ ಕೃತಿಗಳಾದ "ಆಳ", "ಮೂಲಮುಖಿ" ಮುಂತಾದವುಗಳು ಸ್ತ್ರೀ ಪ್ರಧಾನವಾದ ಪಾತ್ರವನ್ನು ಹೊಂದಿರುವ ಕತೆಗಳೇ ಆಗಿವೆ, ಅವರಿಗೆ ಅನೇಕ ಪ್ರಶಸ್ತಿಗಳು ಲಭಿಸಿವೆ. ಸ್ತ್ರೀ ಆಂದೋಲನದ ಕ್ರಿಯಾತ್ಮಕ ಚಟುವಟಿಕೆಗಳಲ್ಲೂ ಭಾಗವಹಿಸಿ ಅನೇಕ ಭಾಷಣಗಳನ್ನು ಮಾಡಿರುವ ಅವರು, ಇತ್ತೀಚೆಗೆ ಕೆಲವು ಕವಿತೆಗಳನ್ನೂ ರಚಿಸಿ ಪ್ರಕಟಿಸಿದ್ದರು. ಅನೇಕ ಟಿ. ವಿ. ಸಂದರ್ಶನ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿರುವ ಅವರು ಮಕ್ಕಳಿಗಾಗಿಯೂ ಅನೇಕ ಕತೆಗಳನ್ನು ಬರೆದಿರುತ್ತಾರೆ. ಅವರ ಪತಿ ನಿರಂಜನ ಅವರು ಖ್ಯಾತ ಸಾಹಿತಿ, ಜೊತೆಗೆ ಮಕ್ಕಳೂ ಸಾಹಿತ್ಯಾಸಕ್ತರಾಗಿ, ಇಡೀ ಕುಟುಂಬವೇ ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ಕೊಟ್ಟಿದೆ, ಸಾಹಿತ್ಯ ಕ್ಷೇತ್ರದಲ್ಲಿ ಮನೆಮಾತಾಗಿದೆ.

ಇಷ್ಟು ವರುಷಗಳ ಕಾಲ ಸಾರ್ಥಕ ಬದುಕನ್ನು ಬಾಳಿದ ಅನುಪಮಾ ಈಗ ನಮ್ಮೊಡನೆ ಇಲ್ಲ. ಆದರೆ ಅವರು ರಚಿಸಿರುವ ಸಾಹಿತ್ಯ ಸದಾಕಾಲಕ್ಕೂ, ಹೆಣ್ಣು ಮಕ್ಕಳ ಬಾಳಿಗೆ, ಬದುಕಿಗೆ, ಸರ್ವಶಕ್ತಿಯಾಗಬದಲ್ಲ ಎಂಬುದು ನಿತ್ಯಸತ್ಯ.

ಭಾರತಿ ಕೇಶವ್.

---

## ಪ್ರೀತಿಯ ಬೆಲೆ ಬಲ್ಲೆಯೇನು ಮರುಳೆ?

"ಪ್ರೀತಿಯ ಅರ್ಥ ನೀನೇನು,
ಬಲ್ಲೆ, ಎಲೆ ಮರುಳೆ,
ನಿನ್ನಲ್ಲಿ ಹೃದಯ ಇದ್ದರಲ್ಲವೆ, ಇದ್ದರೂ
ಅದಕ್ಕೊಂದು ಮಿಡಿತ ಇದ್ದರಲ್ಲವೆ?
ಅಳಲು ಅರಿಯದ ಕಣ್ಣು ಎಷ್ಟು,
ನಕ್ಕರೇನು ಬಂತು,
ನೋವರಿಯದ ನಲಿವು ಎಷ್ಟಿದ್ದರೇನು
ಬಂತು,
ಬಿಂಕ, ಬಿಗುಮಾನಗಳ ಕಂಕುಳಲ್ಲಿಟ್ಟು,
ಸೆಟೆದು ನಡೆದರೇನು ಬಂತು,
ಜ್ಞಾನ ಭಂಡಾರವನ್ನೆಲ್ಲ ತಲೆಯ ಮೇಲಿಟ್ಟು,
ಬೀರುತ್ತ ನಡೆದರೇನು ಬಂತು,
'ಬಾಳೊಂದು ಭಾವಗೀತೆ' ಭಾವಗಳೇ,
ಇಲ್ಲದಿದ್ದರೆ ಗೀತೆಯೇನು,
ರಾಗಾಲಾಪಗಳೆ, ಇಲ್ಲದಿದ್ದರೆ,
ಸ್ವರವೇನು,
ಪ್ರೀತಿ ಅಂದರೇನು ನಿನಗೇನು ಗೊತ್ತು,
ಎಲೆ ಮರುಳೆ,
ನಿನ್ನಲ್ಲಿ ಅರ್ಥ ಇದ್ದರಲ್ಲವೆ ಇದ್ದರೂ,
ಅದಕ್ಕೊಂದು ನಿಯತ್ತು ಇದ್ದರಲ್ಲವೆ?
ದೇಹದ ತೃಪ್ತಿಯೆ ಪ್ರೀತಿ,
ಅಂದುಕೊಂಡೆಯೇನು,
ಬಾಹ್ಯ ಸೌಂದರ್ಯವೇ ಪ್ರೇಮವೇನು?
ನಾಲ್ಕುದಿನ ನಾಟಕವಾಡಿ ಬಿಟ್ಟೋಡುವುದು
ಬಂಧನ ಹೌದೇನು?
ಪ್ರೀತಿಯ ವಿಶಾಲತೆ ಸಪ್ತಸಾಗರಕ್ಕೆ,
ಕಡಿಮೆಯೇನು!
ಕಾಶಿಯ ಪಾವಿತ್ರ್ಯತೆ ಇದಕ್ಕಿಂತ,
ಹೆಚ್ಚೇನು?
ಸ್ವಾತಿ ಮುತ್ತಿನ ಅಮೂಲ್ಯತೆ,
ಬಲ್ಲೆಯೇನು,
ಪ್ರೀತಿಯ ಅರ್ಥ ನೀನೇನು ಬಲ್ಲೆ,
ಎಲೆ ಮರುಳೆ,
ನೀನಾರಾದರನ್ನು ಪ್ರೀತಿಸಿದ್ದರಲ್ಲವೆ?
ಪ್ರೀತಿಸಿದ್ದರೂ ಅದರಲ್ಲಿ ನೈಜತೆ ಇದ್ದರಲ್ಲವೆ?"

ಹಸೀನಾ ಗ. ಗುಡಿ.

# ಅಕ್ಕ ಪಕ್ಕ

ಪುರುಷ ಶಕ್ತಿಯನ್ನು ನಾಚಿಸುವಂತೆ ಮಹಿಳಾ ಸಂಘಟನೆಗಳು ಜಾಗೃತಗೊಳ್ಳುತ್ತಿವೆ. ಇದು ಶುಭ ಲಕ್ಷಣ.

ಎಸ್. ಕೆ. ಕರೀಂಖಾನ್
ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಜನಪದ ವಿದ್ವಾಂಸ

ಇಂದು ಭರತ (ನಾಟ್ಯ ಶಾಸ್ತ್ರದ ಕರ್ತೃ) ಬದುಕಿದ್ದಿದ್ದರೆ ಆತ ಭರತನಾಟ್ಯದಲ್ಲಿ ಹಿಂಸೆ ಅಭಿವ್ಯಕ್ತವಾಗುವ ಸೂತ್ರವನ್ನು ಸೇರಿಸಿರುತ್ತಿದ್ದ.

ಮಲ್ಲಿಕಾ ಸಾರಾಭಾಯ್
ಭರತ ನಾಟ್ಯಶಾಸ್ತ್ರ ಪ್ರವೀಣೆ

ನಾನೀಗ ಮದುವೆಯಾಗದೆ ಇದ್ದಿದ್ದರೆ ಮದರ್ ತೆರೇಸಾ ಜತೆ ಸೇರಬೇಕಾಗುತ್ತಿತ್ತು.

ರಂಜೀತಾ
ಚಿತ್ರತಾರೆ

ಅನುಪಮಾ ಅವರು ಬದುಕಿದ್ದಾಗ ಅವರ ಸಾವು ನಮ್ಮನ್ನು ಕಾಡುತ್ತಿತ್ತು. ಈಗ ಅವರ ಬದುಕು ನಮ್ಮನ್ನು ಕಾಡುತ್ತಿದೆ.

ವಿಜಯಾ ದಬ್ಬೆ

ಜವಾಬ್ದಾರಿ ಮತ್ತು ತಾಳ್ಮೆಯ ಗುಣಗಳನ್ನು ಸಹಜವಾಗಿಯೇ ಮೈಗೂಡಿಸಿಕೊಂಡಿರುವ ಮಹಿಳೆಯರು ದೇಶ ಎದುರಿಸುತ್ತಿರುವ ಸಮಸ್ಯೆಯನ್ನು ಪರಿಹರಿಸಲು ಸಹಕರಿಸಬೇಕು. ಪರಿಸರ ರಕ್ಷಣೆ, ಕುಟುಂಬ ಯೋಜನೆ ಮತ್ತು ಸಾಕ್ಷರತಾ ಆಂದೋಲನದಂತಹ ಚಟುವಟಿಕೆಗಳಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕು.

ಕೆ. ಎಚ್. ಪಾಟೀಲ್
ಸಹಕಾರ ಸಚಿವ

ಮಾರ್ಚ್ 25. ಇದೊಂದು ಮಹತ್ವದ ದಿನವೇ ಆಗಿರಬೇಕು. ಮಾರ್ಚ್ 25ರಂದು ಹುಟ್ಟಿದ ನಂಜನಗೂಡು ತಿರುಮಲಾಂಬಾ ಅವರು 95 ವರ್ಷ ಬದುಕಿದ್ದು ಕರ್ನಾಟಕದ ಪ್ರಥಮ ಬರಹಗಾರ್ತಿ, ಉದ್ಯಮಶೀಲ ಮಹಿಳೆಯಾದರು, ಪತ್ರಕರ್ತೆಯಾದರು. ಮಾರ್ಚ್ 25ರಂದು ಹುಟ್ಟಿದ ಉಮಾಬಾಯಿ 99ವರ್ಷ ಬದುಕಿದ್ದು ಕರ್ನಾಟಕದ ಏಕೆ ರಾಷ್ಟ್ರದ ಅತ್ಯಂತ ಶ್ರದ್ಧಾವಂತ ಸಮಾಜ ಸೇವಕಿಯಾದರು. ತಿರುಮಲಾಂಬಾ ಬಾಲವಿಧವೆ, ಉಮಾಬಾಯಿ ಯೌವನದಲ್ಲಿ ವಿಧವೆಯಾದರು. ಇಬ್ಬರಿಗೂ ತಮ್ಮವರೆನ್ನುವ ಮಕ್ಕಳಿಲ್ಲ. ಆದರೆ ಇಬ್ಬರೂ ವೈಧವ್ಯದಿಂದ ದಿಕ್ಕುಗೆಡದೆ, ಕಂಗಾಲಾಗದೆ, ಸೊರಗದೆ ಸಾವಿರಾರು ಮನೆಗಳ ಬೆಳಕಾದರು. ನಿರಾಡಂಬರ ಸ್ವಾರ್ಥರಹಿತ ಸೇವೆಯಿಂದ ಮಕ್ಕಳ, ಮಹಿಳೆಯರ ಪ್ರಗತಿಗೆ ನಾಂದಿಯಾದರು. ಇವರಿಗೆ ಬದುಕು ಭಾರವಾಗಲಿಲ್ಲ. ಇವರಿಂದ ಅನೇಕರ ಬದುಕಿನ ಬವಣೆ ಕಳೆಯಿತು.

ಚಿ. ನ. ಮಂಗಳಾ

ಉಮಾಬಾಯಿ ಅವರಷ್ಟು ದೀರ್ಘಕಾಲ, ಸತತವಾಗಿ, ಸದಾಕಾಲವೂ ಒಂದಿಷ್ಟೂ ಆಡಂಬರವಿಲ್ಲದೆ ಸಮಾಜಸೇವೆಗೈದ ಮಹಿಳೆ ಕರ್ನಾಟಕದಲ್ಲಿ ನನಗೆ ಇದ ಮಟ್ಟಿಗೆ ಬೇರೊಬ್ಬರಿಲ್ಲ. ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಅವರಷ್ಟು ದೀರ್ಘಕಾಲ ನಿರಂತರವಾಗಿ ಕೆಲಸ ಮಾಡಿದ ಮಹಿಳೆ ಬೇರೆ ಇಲ್ಲ ಇಡಿಯ ಭಾರತದಲ್ಲಿ ಇಂಥವರು ತುಂಬ ವಿರಳ.

ನಾ. ಸು. ಹರ್ಡೀಕರ್

ನಾನು ಭಾರತ–ಪರ ಅಥವಾ ಬೇರೆ ಯಾವುದೇ ದೇಶದ ಪರ ಅಲ್ಲ. ನಾನು ಬಾಂಗ್ಲಾ ಪರ.

ಶೇಖ್ ಹಸೀನಾ ವಾಜೆದ್
ಬಾಂಗ್ಲಾದೇಶ–ಅವಾಮಿ ಲೀಗ್ ಅಧ್ಯಕ್ಷೆ

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ, ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್: 28′—8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067